

# ಬೀದರ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಸಂಶೋಧಕರು

**ಸಂಗೀತಾ ಶಂಕರರಾವ**



ಮಾರ್ಗದರ್ಶಕರು

**ಡಾ|| ಜಗನ್ನಾಥ ಹೆಬ್ಬಾಳೆ**

ನಿರ್ದೇಶಕರು

ಕ.ರಾ.ಶಿ.ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.





**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ - 583 276

ನವೆಂಬರ್ -2007



# ಬೀದರ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು

(ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಸಂಶೋಧಕರು

**ಸಂಗೀತಾ ಶಂಕರರಾವ**



ಮಾರ್ಗದರ್ಶಕರು

**ಡಾ॥ ಜಗನ್ನಾಥ ಹೆಬ್ಬಾಳೆ**

ನಿರ್ದೇಶಕರು

ಕ.ರಾ.ಶಿ.ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.



**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ - 583 276

ನವೆಂಬರ್ -2007

# ಪ್ರಮಾಣ ಪತ್ರ

ಬೀದರ ಜಿಲ್ಲೆಯ ಪ್ರೇಕ್ಷಣೆಯ ಸ್ಥಳಗಳ ಅಧ್ಯಯನ ಎಂಬ ನಿಂಬಂಧವನ್ನು ಡಾ. ಜಗನ್ನಾಥ ಹೆಬ್ಬಾಳೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಂಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ : 01-11-2007

**ಸಂಗೀತಾ ಶಂಕರರಾವ**

ಎಂ.ಫಿಲ್. ವಿದ್ಯಾರ್ಥಿನಿ

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.

# ಮಾರ್ಗದರ್ಶಕರ ಪ್ರಮಾಣ ಪತ್ರ

ಬೀದರ ಜಿಲ್ಲೆಯ ಪ್ರೇಕ್ಷಣೆಯ ಸ್ಥಳಗಳ ಅಧ್ಯಯನ ಎಂಬ ನಿಂಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಂಗೀತಾ ಶಂಕರರಾವ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಂಬಂಧವು ಮೂಲವಾಗಿದ್ದು. ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ : 01-11-2007

**ಡಾ. ಜಗನ್ನಾಥ ಹೆಬ್ಬಾಳೆ**

ನಿರ್ದೇಶಕರು,

ಕ.ರಾ.ಶಿ.ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ.

# ಬೀದರ ಜಿಲ್ಲೆಯ ಪ್ರೇಕ್ಷಣಿಯ ಸ್ಥಳಗಳು

## ಪರಿವಿಡಿ

# ಅಧ್ಯಯನದ ಉದ್ದೇಶ

ಕರ್ನಾಟಕದ ಮುಕಟ ಮಣಿಯೆಂದು ಗುರುತಿಸಲ್ಪಡುವ ಬೀದರ ಜಿಲ್ಲೆ ಅನೇಕ ಶತಮಾನಗಳ ಇತಿಹಾಸ ಮತ್ತು ಉಜ್ವಲ ಪರಂಪರೆ ಹೊಂದಿದೆ. ಬೀದರ ಜಿಲ್ಲೆಯು ಅನೇಕ ಸಂಸ್ಕೃತಿಗಳ ಸಂಗಮ. ಇಲ್ಲಿ ಹಿಂದು, ಮುಸ್ಲಿಂ, ಸಿಖ್ಖ, ಕ್ರೈಸ್ತ ಬೌದ್ಧ ಜೈನ, ಸರ್ವ ಧರ್ಮದ ಉಜ್ವಲ ಧಾರ್ಮಿಕ ಪರಂಪರೆಯ ಪರಿಸರ ಹೊಂದಿದೆ. ಬೀದರ ಜಿಲ್ಲೆ ಕಲೆಯ ಬೀಡು ಆಗಿದೆ. ವಚನ ವಾಜ್ಞಯ ನಾಡಾಗಿದೆ. 'ಬೀದರಿ' ಕಲೆಯಲ್ಲಿ ನಿಪುಣತೆಯನ್ನು ಪಡೆದ ಬೀದರ ನವ ಕರ್ನಾಟಕದ ಕಿರೀಟ. ಗಡಿ ನಾಡಿನ ಗುಡುಗು ಮಿಂಚುಗಳ ಜೋತೆಯಲ್ಲಿ ಬದುಕುತ್ತಿದ್ದರೂ ಕನ್ನಡದ ವೀರಪರಂಪರೆಯ ಸತ್ವವನ್ನು ಕಳೆದು ಕೊಂಡಿಲ್ಲ. ಬೀದರ ಜಿಲ್ಲೆಯು ಒಂದು ದಿವ್ಯ ಭವ್ಯಯ ನಾಡಾಗಿದೆ.

ರಾಷ್ಟ್ರ ಹಾಗೂ ರಾಜ್ಯದ ಪ್ರವಾಸಿ ನಕ್ಷೆಯಲ್ಲಿ ಬೀದರ ಜಿಲ್ಲೆ ತನ್ನದೆ ಆದ ವಿಶಿಷ್ಟ ಸ್ಥಾನವನ್ನು ಹೊಂದಿದೆ. ಕಟ್ಟಡ ವಾಸ್ತುಶಿಲ್ಪ. ಮಠ, ಮಂದಿರ, ಮಸೀದಿಗಳು ಕೇವಲ ಪ್ರೇಕ್ಷಣೀಯ ಸ್ಥಾನಗಳಾಗಿರದೆ ಐತಿಹಾಸಿಕ ಧಾರ್ಮಿಕ ಸಮನ್ವಯದ ಜೀವಂತ ಸಾಕ್ಷಿಗಳಾಗಿವ ನಿವಿಧ ಮತ ಪಂಥಗಳ ಈ ಸ್ಮಾರಕಗಳನ್ನು ನೋಡಲು ಬಂದ ಪ್ರವಾಸಿ ಇಲ್ಲಿಯ ಸಾಂಸ್ಕೃತಿಕ ಸ್ನೇಹವನ್ನು ವೀಕ್ಷಿಸಿ ಸಂತಸವನ್ನು ವ್ಯಕ್ತಪಡಿಸದೆ ಇರಲಾರ.

ಪ್ರಾಚೀಲನ ಪರಂಪರೆ ಹೊಂದಿದ ಬೀದರ ಜಿಲ್ಲೆ ಐತಿಹಾಸಿಕ, ಧಾರ್ಮಿಕ ಸಾಂಸ್ಕೃತಿಕ ಕಲೆ, ಸಾಹಿತ್ಯವನ್ನು ಉಳಿಸಿಕೊಳ್ಳುವ ಹಿನ್ನಲೆಯಲ್ಲಿ ಅವುಗಳ ಅಧ್ಯಯನ ಹಾಗೂ ಸಂಶೋಧನೆ ಅನಿವಾರ್ಯ ಎನಿಸಿಕೊಳ್ಳುತ್ತದೆ. ಈ ಕಾರ್ಯ ಪ್ರಾದೇಶಿಕ ಮಟ್ಟದಲ್ಲಿ ಆಗುವುದೇ ಆದರೆ ಇನ್ನೂ ಒಳ್ಳೆಯದೆನಿಸುತ್ತದೆ. ಇದರಿಂದ ಪ್ರಾದೇಶಿಕತೆಗೆ ಹೆಚ್ಚು ಮಹತ್ವ ಕೊಟ್ಟಂತಾಗುತ್ತದೆ.

ಈ ಅಧ್ಯಯನದ ಮುಖ್ಯ ಉದ್ದೇಶವೆಂದರೆ "ಬೀದರ ಜಿಲ್ಲೆಯ ಪ್ರೇಕ್ಷಣಿಯ ಸ್ಥಳಗಳು" ಅನೇಕ ಇವೆ. ಅವುಗಳ ಹಿಂದೆ ಹುದಗಿಕೊಂಡ ಇತಿಹಾಸ ಪರಂಪರೆ ಸಂಸ್ಕೃತಿ, ಕಲೆ, ಧರ್ಮ, ಸಾಹಿತ್ಯ, ಜನಪದ ಹಾಡು, ಕಥೆ, ಐತಿಹ್ಯ, ಪವಾಡ ಒಟ್ಟು ಪರಿಚಯ ಕೊಡುವುದರ ಜೋತೆಗೆ ಹುದಗಿಕೊಂಡಂತ ಸತ್ಯ ಸಂಗತಿಯನ್ನು ಆಧಾರ ಸಹಿತ ಸಾಬೀತು ಪಡಿಸುವುದೆ ಆಗಿರುತ್ತದೆ.

ನಾನು ಬೀದರ ಕೋಟೆಯ ಹತ್ತಿರದ ನಿವಾಸಿ ನಾನು ಚಿಕ್ಕವಳಿದ್ದಾಗಿನಿಂದ ಕೋಟೆಯ ಕುರಿತು ಜನರಿಂದ ಐತಿಹ್ಯ, ಕಥೆ, ಹಾಡು ಕೇಳುತ್ತಿದ್ದೆ. ಚಿಕ್ಕಂದಿನಿಂದ ಕೋಟೆಯ ಬಗ್ಗೆ ಅಲ್ಪ-ಸ್ವಲ್ಪ ತಿಳಿದುಕೊಂಡಿದ್ದೆ ಹಾಗೂ ನನ್ನ ವಿದ್ಯಾಭ್ಯಾಸ ಮೇಥೋಡಿಸ್ಟ ಮಹಾವಿದ್ಯಾಲಯದಲ್ಲಿ ಜರುಗಿತ್ತು. ಆದ್ದರಿಂದ ನನಗೆ ಚರ್ಚಿನ ಬಗ್ಗೆ ಕುತೂಹಲ ಆಸಕ್ತಿ ಪ್ರೀತಿ, ವಿಶ್ವಾಸ, ಇತ್ತು. ಹಾಗೂ ಹಬ್ಬ, ಹುಣ್ಣಿಮೆ, ಜಾತ್ರೆ, ಉತ್ಸವಗಳಿದ್ದಾಗ ಹಿಂದು-ಮುಸ್ಲಿಂ ಮಂದಿರ ಮಜ್ಜೀದಗಳಿಗೆ ಹೋಗಿ ಬರುತ್ತಿದ್ದೆ. ಇದರಿಂದ ನನಗೆ ಚಿಕ್ಕಂದಿನಿಂದ ಇಂತಹ ಸ್ಥಳಗಳ ಬಗ್ಗೆ ಹೆಚ್ಚು ಆಸಕ್ತಿ ಕುತೂಹಲವಿತ್ತು. ಅನೇಕ ಹಿರಿಯರೊಡನೆ ಚರ್ಚೆ ಮಾಡಿದ್ದಾಗ ಅನೇಕ ವಿಷಯಗಳು ಕಂಡುಕೊಳ್ಳಲು ಸಾಧ್ಯವಾಯಿತು.

ಬೀದರ ಜಿಲ್ಲೆಯ ಪ್ರೇಕ್ಷಣಿಯ ಸ್ಥಳಗಳಲ್ಲಿ ಅನೇಕ ಸ್ಥಳಗಳಿವೆ ಅವುಗಳಲ್ಲಿ ಪ್ರಮುಖವಾಗಿ ಧಾರ್ಮಿಕ ಐತಿಹಾಸಿಕ ಸ್ಥಳಗಳಾದ ಬೀದರಿನ ಕೋಟೆ, ಅಷ್ಟೂರಿನ ಗುಮ್ಮಜಗಳು, ಮಹತ್ಮದ ಗವಾನ (ಮದರಸಾ) ಕಾಲೇಜ, ಬಸವ ಕಲ್ಯಾಣ ಕೋಟೆ ಹಾಗೂ ಅನುಭವ ಮಂಟಪ. ಬಸವ ಕಲ್ಯಾಣ ತಾಲೂಕಿನ ನಾರಾಯಣಪೂರ ಗ್ರಾಮ ಶಿವಪುರ, ಹುಮನಾಬಾದ ತಾಲೂಕಿನ ಜಲಸಂಗವಿ ಹಾಗೂ ಧಾರ್ಮಿಕ ಪವಿತ್ರ ಕ್ಷೇತ್ರ ಸ್ಥಳಗಳಾದ ಪಾಪನಾಶಿನಿ, ನರಸಿಂಹ ಝುರ್ಣ,ಗುರುನಾನಕ ಝುರಾ, ಮೇಥೊಟಿಸ್ಟ ಚರ್ಚ್, ಬೌದ್ಧ ವಿಹಾರ, ಮುಲ್ತಾನಿ ಪಾಶದರ್ಗಾ, ಲಾಡಗೇರಿಯ ಶುಕ್ಲ ತಿರ್ಥದಲ್ಲಿರುವ ಗದ್ದುಗೆ ಇತ್ಯಾದಿ ಸ್ಥಳಗಳ ಕುರಿತಂತೆ ಇತಿಹಾಸ ಪರಂಪರೆ, ಕಲೆ, ಸಾಹಿತ್ಯ, ಧರ್ಮ, ಸಂಸ್ಕೃತಿ ಮುಂತಾದ ವಿಷಯವನ್ನು ಅಧ್ಯಯನಕ್ಕೊಳಪಡಿಸಿದ್ದೇನೆ.

ನಮ್ಮ ಅಧ್ಯಯನ ಕೇವಲ ಸ್ಥಳಗಳ ಕುರಿತ ಅಧ್ಯಯನವಾಗಿರದೆ ಎಲ್ಲ ಸ್ಥರದ ವೈಶಿಷ್ಟತೆಗಳನ್ನು ಕೂಲಂಕುಶವಾಗಿ ಪರಿಶೀಲಿಸಬೇಕಾಗುತ್ತದೆ. ಆದ್ದರಿಂದ ನಾನು ''ಬೀದರ ಜಿಲ್ಲೆಯ ಪ್ರೇಕ್ಷಣಿಯ ಸ್ಥಳಗಳು'' ಒಂದು ಅಧ್ಯಯನ ಎಂಬ ವಿಷಯ ಆರಿಸಿಕೊಂಡಿದ್ದೇನೆ.

ನಾನು ಆರಿಸಿಕೊಂಡ ಈ ವಿಷಯ ಬೀದರ ಜಿಲ್ಲೆಯ ಇತಿಹಾಸ ಪರಂಪರೆ ಕಲೆ, ಸಂಸ್ಕೃತಿ, ಧರ್ಮ, ಜನಪದ ಸಾಹಿತ್ಯ ಇತ್ಯಾದಿ ಚಿತ್ರಣ ಈ ನನ್ನ ಅಧ್ಯಯನ ಹುಡುಕಿಕೊಂಡು ಹೋಗುತ್ತದೆ.

ಬೀದರ ಜಿಲ್ಲೆಯ ಪ್ರಾಚೀನ ಇತಿಹಾಸ ಹೊಂದಿದೆ. ಅನೇಕ ರಾಜ್ಯ ಮನೆತನಗಳು ಆಳಿವೆ. ಮೌರ್ಯ, ಶಾತವಾಹನ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಳಚೂರಿ, ದೇವಗಿರಯ ಯಾದವರು, ಬಹಮನಿ, ಬರಿದಶಾಹಿ ಮತ್ತು ಹೈದರಾಬಾದ ನಿಜಾಂರ ಆಳ್ವಿಕೆಗೊಳಪಟ್ಟಿರುವ ಈ ಜಿಲ್ಲೆ ತನ್ನದೆ ಆದ ಸ್ವತಂತ್ರ ರಾಜವಂಶಗಳನ್ನು ಹೊಂದಿದ್ದು, ಗುರುತಿಸಬಹುದು. ಕಲ್ಯಾಣದ ಚಾಲುಕ್ಯ ಅರಸ 6ನೇ ವಿಕ್ರಮಾದಿತ್ಯ. ಕಲ್ಯಾಣದ ಕಲಚೂರಿ ಬಿಜ್ಜಳ ಇತನ ಮಂತ್ರಿ ಬಸವಣ್ಣ, ಬಹಮನಿ ಅರಸ ಮಹಮ್ಮದ ಗವಾನ ಇವರ ಕಾರ್ಯ ಸಾಧನೆ ವ್ಯಕ್ತಿತ್ವ ನೋಡಿದರೆ ಬೀದರ ಜಿಲ್ಲೆ ಒಂದು ಕಾಲದಲ್ಲಿ ಹೆಮ್ಮೆಯ ನಾಡಾಗಿದ್ದಿದ್ದು ನೋಡಬಹುದು.

ಬೀದರ ಜಿಲ್ಲೆಯ ವಿವಿಧ ಸಾಂಸ್ಕೃತಿಗಳ ಸಮ್ಮಿಲನದ ಸಂಕೇತವಾಗಿದೆ. ಬಹಮನಿ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಬೀದರ ಜಿಲ್ಲೆ ಸಾಂಸ್ಕೃತಿಕ ಹಿರಿಮೆಯಿಂದ ಜಗತ್ತಿನ ಲಕ್ಷ್ಯವನ್ನು ತನ್ನಡೆಗೆ ಹೊರಳಿಸಿತ್ತು. ಅಂದಿನ ರಾಜ್ಯ ವಂಶಗಳಿಲ್ಲದಿದ್ದರೂ ಅಂದಿನಿಂದ ಇಂದಿನವರೆಗೂ ಬೀದರ ಜಿಲ್ಲೆ ಏಕತೆಯಲ್ಲಿ ಅನೇಕತೆ ಅನೇಕತೆಯಲ್ಲಿ ಏಕತೆ, ಇದ್ದದ್ದನ್ನು ಕಾಣುತ್ತೇವೆ. ಇಂದು ಕೂಡ ಬೀದರ ಜಿಲ್ಲೆಯಲ್ಲಿ ಮಂದಿರ ಮಜೀದಗಳಲ್ಲಿ ಹಬ್ಬ, ಜಾತ್ರೆ, ಉತ್ಸವಗಳು ಎಲ್ಲ ಜನಾಂಗದ ಜನರು ಆಚರಿಸುವುದು ಕಾಣುತ್ತೇವೆ.

ಬೀದರ ಜಿಲ್ಲೆ ನೋಡುತ ಹೋದರೆ ಕಲೆ, ಸಾಹಿತ್ಯದಲ್ಲಿ ಒಂದು ಭವ್ಯ ನಾಡಾಗಿದೆ. ಬೀದರಿನ ಕೋಟೆಯಲ್ಲಿ ತಕ್ತಮಹಲ, ತರ್ಕಶ ಮಹಲ, ಗಗನ ಮಹಲ, ರಂಗಿನ ಮಹೆಲ, ಸಭಾಸದನ, ಸೋಲಾಕಂಬ, ಮಸೀದಿ ಇವು ಕೇವಲ ಇತಿಹಾಸ ಸ್ಮಾರಕಗಳಲ್ಲ ಬಹುಮನಿ ಬರಿದಶಾಹಿ ಸುಲ್ತಾನರ ವೈಭವದ ಕಲಾತ್ಮಕ ಬದುಕಿನ ದರ್ಶನವನ್ನು ಮಾಡಿಸುತ್ತವೆ. ಅಷ್ಟೂರಿನ ಗುಮ್ಮಜಗಳು ಹಾಗೂ ಮಹಮ್ಮದ ಗವಾನ ವಿಶ್ವವಿದ್ಯಾಲಯ ಬಹಮನಿ ಕಾಲದ ಅನುಪಮ ಕಲಾ ಸಂಪತ್ತಿನ ಸ್ಮಾರಕಗಳಾಗಿವೆ. ಕಾಲ್ಯಣ ಚಾಲುಕ್ಯರ ದೇಗುಲಗಳು ಕಲೆಯ ಕಣಜಗಳಾಗಿವೆ. ಶಿವಪುರು, ನಾರಾಯಣಪೂರ ಹಾಗೂ ಜಲಸಂಗಿಗಳಲ್ಲಿ ನಿರ್ಮಾಣವಾದ ಕಲೆ ಇಲ್ಲಿ ಮೆರೆದದ್ದನ್ನು ನೆನಪಿಗೆ ತರುತ್ತವೆ. ಜಲಸಂಗಿಯ ಕಲ್ಲೇಶ್ವರ ದೇವಲಾಯ ಒಂದು ಅಪೂರ್ವ ಕಲೆಯ ಬಿಡು. ಇಂತಹ ಬೀದರ ಜಿಲ್ಲೆಯ ಕಲೆ ಉಳಿಸಿ, ಉಳಿಸಿಕೊಳ್ಳುವುದರ ಜೋತೆಗೆ ಅಧ್ಯಯನ ಸಂಶೋಧನೆಗೊಳಪಡಿಸಬೇಕು ಆಗ ಒಂದು ನಾಡಿನ ಮಹತ್ವ ತಿಳಿಯುತ್ತದೆ.

ದೇಶಿ ಸಂಸ್ಕೃತಿ ಉಳಿಸಬೇಕು. ದೇಶಿ ವಿಷಯದ ಹುಡುಕಾಟದ ಸಂದರ್ಭದಲ್ಲಿ ಅನೇಕ ತೊಂದರೆಗಳು ಎದುರುಗೊಂಡಿವೆ. ಲಿಖಿತ ಹಾಗೂ ಮೌಖಿಕ ದಾಖಲೆಗಳ ಕೊರತೆ ಒಂದು ವಿಷಯವನ್ನು ಇನ್ನೊಂದು ವಿಷಯದೊಡನೆ ತಿರುಚಿ ಮರುಚಾಗಿ ಹೆಳುವಿಕೆ ಹೀಗೆ ಹಲವಾರು ತೊಂದರೆಗಳುಂಟಾಗಿವೆ. ಸ್ಥಳಿಯ ವಿಷಯಕ್ಕೆ ಪ್ರಾಮುಖ್ಯವಾಗಿ ಎದುರಾಗುವ ಸಮಸ್ಯ ಎಂದರೆ ದಾಖಲೆಗಳು ಲಭ್ಯವಾಗದಿರುವುದು ದಾಖಲೆಗಳನ್ನು ಪರಿಶೀಲಿಸುವಾಗ ಸಂಶೊಧಕನು ಸೀಮಿತ ಪ್ರದೇಶದಲ್ಲಿ ಕಂಡು ಬರುವಂತಹ ಜಾತಿ, ಧರ್ಮ, ಮಠ,ದೇವಾಲಯ ಮುಂತಾದವುಗಳ ನಡುವೆ ನಿಷ್ಠೂರವಾದ ಸತ್ಯ ಸಂಗತಿಯನ್ನು ಹೇಳುವಾಗ ಸಮಸ್ಯಗಳ ಬಲೆಯಲ್ಲಿ ಸಿಕ್ಕಿಕೊಳ್ಳುವುದು ಕಂಡು ಬರುತ್ತದೆ. ಕೆಲವು ಸಲ ಲಿಖಿತ ದಾಖಲೆಗಳಿಲ್ಲದೆ ಒದ್ದಾಡಬೇಕಾಗುತ್ತದೆ. ಈ ಎಲ್ಲ ಪ್ರಯತ್ನಗಳನ್ನು ಮೀರಿ ನನ್ನ ಈ ಕಿರು ಪ್ರಬಂಧವನ್ನು ಬರೆಯಲು ಪ್ರಯತ್ನ ಪಟ್ಟಿದ್ದೇನೆ.

ಇನ್ನೊಂದು ಮಹತ್ವದ ವಿಷಯವೆಂದರೆ ಇತಿಹಾಸದಲ್ಲಿ ನಡೆದುಹೋದ ಸತ್ಯ ಘಟನೆಗಳ ಬಗ್ಗೆ ಯಾವುದೆ ಪುರಾವೆಗಳು ಸಿಗದೆ ಕತ್ತಲೆ ಕವಿದುಕೊಂಡಂಥ ಸಹಸ್ರ ಘಟನೆಗಳಿವೆ. ಈ ಘಟನೆಗಳಿಗೆ ಯಾವುದೇ ಗಟ್ಟಿ ಆಧಾರಗಳಿರದೆ ಕೇವಲ ಜನಪದರ ನಾಲಿಗೆಯ ಮೇಲೆ ಹಾಡಾಗಿ ಕಥೆಯಾಗಿ ಐತಿಹ್ಯವಾಗಿ ಹೊರಹೊಮ್ಮುತ್ತವೆ. ಜನಪದರು ಹಿಂದೆ ಆದಂತಹ ಹಾಗೂ ಮರೆ ಯಾದಂತಹ ಘಟನೆಯ ಸುತ್ತ ಕಥೆ ಕಟ್ಟಿಯೂ ಹಾಡಕಟ್ಟಿಯೂ ತಲೆಮಾರಿನಿಂದ ತಲೆಮಾರಿಗೆ ರವಾನಿಸುತ್ತ ಬರುತ್ತಿವೆ. ಇಂಥ ಹಾಡುಗಳು ಬೀದರ ಜಿಲ್ಲೆಯ ಕುರಿತ ಐತಿಹಾಸಿಕ ಸ್ಥಳಗಳಾದ ಕೋಟೆ, ಮಂದಿರ, ಮಜೀದಗಳ ಮಹಾನ ವ್ಯಕ್ತಿಗಳ ಕುರಿತ ಹಾಗು ಐತಿಹ್ಯ ಕಥೆ ಪವಾಡ ಮುಂತಾದವುಗಳನ್ನು ಇಲ್ಲಿ ನೇರವಾಗಿ ಬಳಸಿಕೊಂಡಿರುತ್ತೇನೆ.

ಬೀದರ ಜಿಲ್ಲೆಯ ಪ್ರೇಕ್ಷಣಿಯ ಸ್ಥಳಗಳು ಅತ್ಯಂತ ವೈಭವ ದಿಂದ ಕೂಡಿವೆ. ಬೀದರ ಜಿಲ್ಲೆಯ ಐತಿಹಾಸ ಪರಪಂಪರೆ ಧಾರ್ಮಿಕ, ಸಾಂಸ್ಕತಿಕ ಕಲೆ, ಸಾಹಿತ್ಯ, ಇತ್ಯಾದಿ ಕುರಿತ ಮರೆಯಾದಂತಹ ವಿಷಯ ಘಟನೆಗಳ ಜನಪದರಿಂದ ತಿಳಿಯುತ್ತ ಮರೆಯಾದ ಘಟನೆ ಹುಡುಕುತ್ತ ಸತ್ಯ ಸಂಗತಿಯನ್ನು ಕಂಡುಕೋಳ್ಳುತ್ತ ಬೀದರ ಜಿಲ್ಲೆಯ ಚಿತ್ರಣ ಚಿತ್ರಕರಿಸುತ್ತ ಈ ಅಧ್ಯಯನಕ್ಕೆ ತೋಡಗಿದ್ದೇನೆ.

ಬೀದರ ಜಿಲ್ಲೆಯ ಕುರಿತ ಎಷ್ಟೊ ವಿಷಯ ಬೆಳಕಿಗೆ ಬಾರದೆ ಇರಬಹುದು, ಆದರೆ ಜನಪದರ ಬಾಯಲ್ಲಿ ಇವುಗಳ ಹೆಸರು ಅಜರಾಮರವಾಗಿ ಉಳಿದದ್ದು ಕಂಡು ಬರುತ್ತವೆ ಹಾಗೂ ಶಾಸನ ಮಂದಿರ, ಮಜೀದ, ಸ್ಮಾರಕಗಳು ಸಾಕ್ಷಿ ಆಗಿವೆ. ಹೀಗೆ ಎಲ್ಲವುಗಳನ್ನು ಸೇರಿಸಿ ಚೌಕಟ್ಟನ್ನು ನಿರ್ಮಿಸಿ ದಾಖಲೆಗೊಳಪಡಿಸುವುದೇ ಆಗಿದೆ.

ಬೀದರ ಜಿಲ್ಲೆಯ ನೋಡುತ್ತ ಹೊದಂತೆ ಪವಿತ್ರವಾದ ಧಾರ್ಮಿಕ ಕ್ಷೇತ್ರಗಳ ಸ್ಥಳವಾಗಿದೆ. ಎಲ್ಲ ಧರ್ಮದ ಪವಿತ್ರ ಪ್ರಾಚೀನ ಸ್ಥಳಗಳಿವೆ. ಹಿಂದು, ಮುಸ್ಲಿಂ, ಸಿಖ್ಖ, ಬೌದ್ಧ, ಕ್ರೈಸ್ತ, ಜೈನ ಮಂದಿರ ಮಜ್ಜೀದಗಳಿವೆ. ಭಕ್ತಿ ಶಾಂತಿಯ ಸ್ಥಾನಗಳಾಗಿವೆ. ಗುರುನಾನಕ ಝರಾ ಶಾಂತಿ ಧಾಮ ಸಿಖ್ಖ ಜನಾಂಗದ ಪವಿತ್ರ ಯಾತ್ರಾ ಸ್ಥಳವಾಗಿದೆ. ಪಾಪನಾಶಿನಿ, ನರಸಿಂಹ ಝರಾ ಹಿಂದುಗಳ ಪವಿತ್ರ ಯಾತ್ರ ಕ್ಷೇತ್ರಗಳಾಗಿವೆ. ಅಷ್ಟೂರ ಅಲ್ಲಮ ಪ್ರಭು ಗುಮ್ಮಜ ಇದು ಹಿಂದು-ಮುಸ್ಲಿಂ ಸಮೀಲನದ ಸಂಕೇತವಾಗಿದೆ. ಇದ್ದರಿಂದ ಬೀದರ ಜಿಲ್ಲೆಯ ಧಾರ್ಮಿಕ ಮಹತ್ವ ತಿಳಿಯುತ್ತದೆ. ಇದು ಬೀದರ ಜಿಲ್ಲೆಯ ಸಾಂಸ್ಕೃತಿಕ ಹೇಮ್ಮೆಯ ಸಂಕೇತವಾಗಿದೆ. 12ನೇ ಶತಮಾನದ ಧಾರ್ಮಿಕ ಕ್ರಾಂತಿ ಪುರುಷ ಬಸವಣನವರ ಕಾರ್ಯಸಾಧನೆಗಳ ನಾಡಾಗಿದೆ. ವಚನ ವಾಙ್ಮಯ ಬಿಡಾಗಿದೆ. ಮಹಮ್ಮದ ಗವಾನ ಗಾಲೇಜ (ಮದರಸಾ) ಇದು ವಿಶ್ವ ವಿದ್ಯಾಕೇಂದ್ರವಾಗಿತ್ತು. ಇದೇಲ್ಲದರ ಬಗ್ಗೆ ಇಂದು ಕೂಡ ಇತಿಹಾಸ ಸಾಕ್ಷಿ ಆಗಿದೆ.

ಬೀದರ ಜಿಲ್ಲೆಯ ಪ್ರೇಕ್ಷಣಯ ಸ್ಥಳಗಳು ನೋಡುತ್ತ ಹೊದಂತೆ ಅವುಗಳ ಹಿಂದೆ ಹುದಗಿಕೊಂಡತಂಹ ಇತಿಹಾಸ. ಪರಂಪರೆ ಸಂಸ್ಕೃತಿ ಧಾರ್ಮಿಕ, ಆಡಳಿತ, ಕಲೆ, ಸಾಹಿತ್ಯ ಐತಿಹ್ಯ ಕಥೆ, ಹಾಡು, ಪವಾಡ ಇತ್ಯಾದಿ ಎಲ್ಲವು ಕುತೂಹಲ ಕೆರಳಿಸುವುದರ ಜೋತೆಗೆ ತನ್ನ ಆಸ್ತಿತ್ವವನ್ನು ಉಳಿಸಿಕೊಂಡಿದ್ದು. ಆಶ್ಚರ್ಯ ಮೂಡಿಸುತ್ತದೆ. ಹಾಗೂ ಇವು ಎಲ್ಲವುಗಳನ್ನು ಒಂದು ಸೂಡಿಗೆ ಕಟ್ಟಿ ಅಧ್ಯಯಯನ ನಡ್ಲೆಸುವದು ಕಷ್ಟ ಸಾಹಸದ ಕಾರ್ಯವಾಗಿದೆ.

ಮಹಮ್ಮದ ಗವಾನನ್ನ ಕಾಲದಲ್ಲಿ ಬೀದರ ಜಿಲ್ಲೆಯನ್ನು ರಷ್ಯದ ಪ್ರವಾಸಿ ನಿಕೀಟನ ಸಂದರ್ಶನ ನೀಡಿದ ''ಇಡಿ ಹಿಂದೂಸ್ಥಾನದಲ್ಲಿ ಬೀದರ ಪ್ರಸಿದ ನಗರ ವೆಂದು'' ಬಣ್ಣಿಸಿದ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ವಿಜ್ಞಾನೇಶ್ವರ ''ಮಿತಾಕ್ಷರ'' (ಸಂಹಿತಾ) ಗ್ರಂಥ ರಚಿಸಿದ ಭಾರತೀಯ ಧರ್ಮ ಶಾಸ್ತ್ರಗ್ರಂಥ ಲೋಕಕ್ಕೆ ಇದು ಬೀದರ ಜಿಲ್ಲೆಯ ಕಾಣಿಕೆ ಆಗಿದೆ. ವಿಜ್ಞಾನೇಶ್ವರನು ಕ್ಷಿತಿತಲದಲ್ಲಿ ಕಲ್ಯಾಣದಂಥ ನಗರ

ಹಿಂದೆಂದೂ ಇದ್ದಿರದೆ ಮುಂದೆಂದೂ ಇರಲಾಗದ ನಗರ ಮತ್ತು ವಿಕ್ರಮಾದಿತ್ಯನಂಥ ಅರಸ ಇರಲಾರರು ಎಂದು ತಿಳಿಸಿದ್ದಾನೆ. ಈ ಒಂದೆ ಉಕ್ತಿ ಕಲ್ಯಾಣದ ಚಾಳುಕ್ಯ ಸಮಗ್ರ ಸಮೃದ್ಧಿ ತಿಳಿಸುತ್ತದೆ.

ಇಂಥ ವೈಭವದ ನಾಡಾಗಿ ಮೇರೆದ ಬೀದರ ಜಿಲ್ಲೆ ಇಂದು ಕೂಡ ನೋಡಲು ತನ್ನ ಆಸ್ತಿತ್ವ ಕಳೆದುಕೊಂಡಿಲ್ಲ.

ಬೀದರ ಜಿಲ್ಲೆ ಒಳ್ಳೆಯ ರಾಜ ಮನೆತನಗಳು ಆಳಿದ ನಾಡಾಗಿದೆ. ಸರ್ವಧರ್ಮದ ಸಮನ್ವಯದ ನಾಡಾಗಿದೆ. ಮಹಾ ಸಂತರ ನಾಡಾಗಿದೆ. ಕಲೆ ಸಾಹಿತ್ಯದ ನಾಡಾಗಿದೆ. ಹಲವು ಸಂಸ್ಕೃತಿಯ ಸಂಗಮದ ನಾಡಾಗಿದೆ. ಬೀದರ ಜಿಲ್ಲೆ ಇತಿಹಾಸ ಪರಂಪರೆ ಪಡೆದಿದೆ. ಇದು ಎಲ್ಲದರ ಬಗ್ಗೆ ಇತಿಹಾಸ ಸಾಕ್ಷಿ ಆಗಿದೆ.

ಬೀದರ ಜಿಲ್ಲೆಯ ಪ್ರೇಕ್ಷಣೆಯ ಸ್ಥಳಗಳ ಕುರಿತ ಅಧ್ಯಯನದ ಮಹತ್ವದ ಲಾಭವೆಂದರೆ ನಮ್ಮ ನಾಡಿನ ಚರಿತ್ರೆಯ ಇತಿಹಾಸ ಪರಂಪರೆ ಕಲೆ, ಸಾಹಿತ್ಯ, ಧರ್ಮ ಸಂಸ್ಕೃತಿ ಹಾಗೂ ಜನಪದ ಸಾಹಿತ್ಯ ಹೀಗೆ ಒಟ್ಟು ಚಿತ್ರಣ ನಿಡುತ್ತ ಎಲ್ಲವುಗಳನ್ನು ಸೇರಿಸಿ ಚೌಕಟನ್ನು ನಿರ್ಮಿಸಿ ದಾಖಲೆಗೊಳ ಪಡಿಸುವುದೇ ಆಗಿದೆ.

ಹೀಗೆ **"ಬೀದರ ಜಿಲ್ಲೆಯ ಪ್ರೇಕ್ಷಣಿಯ ಸ್ಥಳಗಳು"** ಒಂದು ಅಧ್ಯಯನ ಎಂಬ ವಿಷಯವು ಒಂದೆ ಉದ್ದೇಶಕ್ಕೆ ಇಟ್ಟುಕೊಂಡು ಹೊರಡದೆ ತನ್ನ ತೆಕ್ಕೆಯೊಳಗೆ ಅನೇಕಾನೇಕ ಉದ್ದೇಶಗಳನಿಟ್ಟುಕೊಂಡು ಹೊರಟಿರುವುದು ಈ ಮೂಲಕ ಗಮನಕ್ಕೆ ತಂದಿರುತ್ತೇನೆ.

ಈ ಅಧ್ಯಯನ ಬೀದರ ಜಿಲ್ಲೆಯ ಐತಿಹಾಸಿಕ, ಧಾರ್ಮಿಕ ಸ್ಥಳಗಳ ಜೋತೆ ಜೋತೆಗೆ ಬೀದರ ಜಿಲ್ಲೆಯ ಚಿತ್ರಣ ಬಿಚ್ಚಿ ತೋರಿಸುತ್ತದೆ.

## ಆಧರ ಗ್ರಂಥಗಳು


1) ಬೀದರ ಜಿಲ್ಲಾ ದರ್ಶನ : ಸಂ. ಡಾ।। ಜಗನ್ನಾಥ ಹೆಬ್ಬಾಳೆ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತ, ಬೀದರ.

2) ಬೀದರ ಜಿಲ್ಲೆಯ ಸಾಹಿತ್ಯಾವಲೋಕನ : ಡಾ।। ಜಗನ್ನಾಥ ಹೆಬ್ಬಾಳೆ ಬೀದರ ಜಿಲ್ಲಾ ಹಾಗೂ ತಾಲ್ಲೂಕ ಕನ್ನಡ ಸಾಹಿತ್ಯ ಪರಿಷತ್ತು, ಭಾಲ್ಕಿ.

# ಬೀದರ ಜಿಲ್ಲೆಯ ಇತಿಹಾಸ ಮತ್ತು ಪರಂಪರೆ

ಶತಶತಮಾನಗಳ ಐತಿಹ್ಯ ಪಡೆದ ಬೀದರ ವಿವಿಧ ಜನಾಂಗ ಸಂಸ್ಕೃತಿಗಳ ಸಮ್ಮಿಲನದ ಸಂಕೇತ, ಹಿಂದು-ಮುಸ್ಲಿಂ ಬಾಂಧವ್ಯದ ಕೇಂದ್ರ.

ಮಹಾ ವಿಭೂತಿ ಪುರುಷರ ಪುಣ್ಯದ ನೆಲೆಯಾಗಿದ್ದಂತೆ. ಉಜ್ವಲ ಧಾರ್ಮಿಕ ಕ್ಷೇತ್ರಗಳ ಪರಂಪರೆಯ ಪರಿಸರ ಹೊಂದಿದೆ. ಕಲೆ, ಸಾಹಿತ್ಯಗಳಿಗೆ ಅಪೂರ್ವ ಕಾಣಿಕೆ ನೀಡಿದೆ. ಕಲ್ಯಾಣದ ಚಾಳುಕ್ಯ ಕಲಚೂರಿ ಅರಸರು, ಬಹಮನಿ ಬರಿದಶಾಹಿ ಮನೆತನಗಳು ಆಳಿದು ಆರ್ಥಿಕ, ಧಾರ್ಮಿಕ, ರಾಜಕೀಯ ರಂಗಗಳಲ್ಲಿ ಜಗತ್ಪ್ರಸಿದ್ಧಿಯನ್ನು ಗಳಿಸಿತ್ತು. ಗಡಿನಾಡಿನ ಗುಡುಗು-ಮಿಂಚುಗಳ ಜೋತೆಯಲ್ಲಿ ಬದುಕುತ್ತಿದ್ದರೂ ಕನ್ನಡದ ವೀರಪರಂಪರೆಯ ಸತ್ವವನ್ನು ಕಳೆದುಕೊಂಡಿಲ್ಲ. ಅಂದಿನ ರಾಜ್ಯ ವಂಶಗಳಿಲ್ಲದಿದ್ದರೂ ಅಂದಿನ ಸ್ಮಾರಕ ಕಟ್ಟಡ ಕಲೆ, ಸಾಹಿತ್ಯ, ಶಾಸನ, ಮಂದಿರ ಮಜ್ಜೀದಗಳು ಇತಿಹಾಸದ ಸಾಕ್ಷಿ ಸಂಕೇತಗಳಾಗಿವೆ.

## ಬೀದರ ಎಂಬ ಪದದ ನಿಷ್ಪತ್ತಿ

ಪೌರಾಣಿಕವಾಗಿ ಬೀದರ 'ವಿದುರ ನಗರ' ಮಹಾಭಾರತದ ಕಾಲದಷ್ಟು ಇದರ ಪ್ರಾಚೀನತೆ ಶ್ರೇಷ್ಠವಾದ ನಾಗರಿಕತೆಗೆ ಹೆಸರುವಾಸಿ, ನಳ-ದಮಯಂತಿಯರ ಪ್ರಖ್ಯಾತ ಪ್ರಣಯದ ಉದ್ಯಾನವೆಂತಲೂ ಪ್ರತೀತಿ, ಕಾಲಕಾಲಕ್ಕೆ ಅನೇಕ ಹೆಸರುಗಳಿಂದ ಪ್ರಸಿದ್ಧಿ, ಬೀದರ ಇದರ ಮೂಲ ಶಬ್ಧ, 'ಬಿದಿರು' 'ಬಿದಿರೆ' ಎಂದರೆ 'ಬೀದಿರು' ಬೆಳೆಯುವ ಪ್ರದೇಶ ಅಂತೆಯೆ ಇದಕ್ಕೆ ಬಿದಿರ ಬಿದಿರುಪೂರ - ಬಿದಿನೂರು - ಬೀದರೆ ಇತ್ಯಾದಿ ಹೆಸರುಗಳು. 15ನೆ ಶತಮಾನದ ಕನ್ನಡ - ಮರಾಠಿ ಗ್ರಂಥಗಳಲ್ಲಿ ಈ ಹೆಸರುಗಳ ಉಲ್ಲೇಖ ಮತ್ತು ಬೀದರ ಎಂಬ ಹೆಸರು ಹೇಗೆ ಬಂತು ಎಂದಾಗ ಇಲ್ಲಿಯ ಜನರು ಬೇಡರ ಇದ್ದರು. ಅಂದರೆ ಉರ್ದುವಿನಲ್ಲಿ ಭಯವಿಲ್ಲದ ಎಂದರ್ಥ. ಹೀಗಾಗಿ ಬೇಡರ - ಬೀದರ ಆಯಿತು ಎನ್ನುವವರು ಇದ್ದಾರೆ.

ಹೀಗೆ ಅನೇಕ ರೀತಿಯ ಹೇಳಿಕೆಗಳನ್ನು ಕಾಣುತ್ತೇವೆ. ಇಂಥ ಹೆಳಿಕೆಗಳಿಂದ ಬೀದರ ಎನ್ನುವುದಕ್ಕೆ ಮೊದಲು ಬೇರೆ ಹೆಸರು ಇದ್ದಿರಬೇಕೆಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ಉತ್ತರವಾಗಿ ಇಂದಿಗೂ ಜನಪದರು ಬೀದರ ಬದಲಾಗಿ 'ಕ್ವಾಟಿ' ಎಂದು ಕರೆಯುತ್ತಾರೆ. 'ಕ್ವಾಟಿ' ಎಂದೇಕೆ ಕರೆಯುತ್ತಾರೆಂದರೆ ಇಲ್ಲಿ ಕೋಟೆ ನಿರ್ಮಾಣವಾದಾಗಿನಿಂದ ಈ ಹೆಸರು ಪಡೆದಿರಬೇಕೆನಿಸುತ್ತದೆ. ಕೋಟೆಯ ನಿರ್ಮಾಣದ ಮುಂಚೆ ಎಂಬ ಪ್ರಶ್ನೆಗೆ ಮುಸ್ಲಿಂ ಅರಸರ ಕಾಲದಲ್ಲಿ ಅಹಮ್ಮದಬಾದ, ಮೊಹಮ್ಮದ ಬೀದರ ಮುಂತಾದ ಹೆಸರುಗಳಿದ್ದವು ಎಂಬುದಕ್ಕೆ ಇತಿಹಾಸ ಏದೆ. ಮಹಮ್ಮದ ಗವಾನಗಿಂತ ಮುಂಚಿರುವ ಮಹಮ್ಮದಶಾ ಹಾವಲಿ ಬಹಮನಿ

ಆಡಳಿತದಿಂದ ಬೀದರ ಎಂಬ ಹೆಸರು ಪಡೆಯಿತೆಂಬುವುದಿದೆ. ಜನಪದರಲ್ಲಿ 'ಧರಿ' ನಾಡು ಎನಿಸಿಕೊಂಡಿದೆ. 'ಧರಿ' ಎಂದರೆ ಇಳಿಜಾರು ಪ್ರದೇಶ ಎಂದರ್ಥ ಹೀಗೆ ಬೀದರ ಜಿಲ್ಲೆ ಅನೇಕ ಹಸರು ಹೊಂದುತ್ತ ಸದ್ಯಕ್ಕೆ ಬೀದರ ಎಂಬ ಹೇಸರಿನಿಂದ ಪ್ರಸಿದ್ದಿ ಹೊಂದಿದೆ.

ಬೀದರ ಜಿಲ್ಲೆಯ ಪ್ರಾಚೀನ ಇತಿಹಾಸ ಅಸ್ಪಷ್ಟವಾಗಿದೆ. ರಾಜ್ಯ ಪುರಾತತ್ವ ಇಲಾಖೆ ಕೈಕೊಂಡ ನಿರೀಕ್ಷಣೆಯಿಂದ ಅನೇಕ ಸ್ಥಳಗಳಲ್ಲಿ ಹಳೆ-ಹೊಸ ಶಿಲಾಯುಗದ ಜನ-ಜೀವನದ ಅಂಶಗಳು ಬೆಳಕಿಗೆ ಬಂದಿವೆ. 5ನೇ ಶತಮಾನದಿಂದ ಅನೇಕ ಅರಸರ ಮನೆತನಗಳ ಆಳ್ವಿಕೆಗೆ ? ಮೊದಲು ಮೌರ್ಯರು, ಶಾತವಾಹನರು, ಕದಂಬರು ಇವರ ಇತಿಹಾಸ ಅಸ್ಪಷ್ಟವಾಗಿದೆ ನಂತರ 8ನೇ ಶತಮಾನದಲ್ಲಿ ರಾಷ್ಟ್ರಕೂಟ ಮನೆತನದ ದೊರೆಗಳ ಪ್ರಭುತ್ವ ಕನ್ನಡ ಭಾಷೆ ಸಂಸ್ಕೃತಿ, ಕಲೆ, ಸಾಹಿತ್ಯಗಳ ಬೆಳವಣಿಗೆಯ ವಸಂತಕಾಲ ಅದಾಗಿತ್ತು. 10ನೇ ಶತಮಾನದಲ್ಲಿ ಕಲ್ಯಾಣದ ಚಾಲುಕ್ಯರ ಆಳ್ವಿಕೆಯ ಪ್ರಾರಂಭ ಕಲ್ಯಾಣದ ರಾಜ್ಯಧಾನಿ ಬೀದರ ಉಜ್ವಲ ಇತಿಹಾಸದ ಮೊದಲ ಅಧ್ಯಾಯ ಪ್ರಾರಂಭ ನಂತರ ಮುಸ್ಲಿಂ ಅರಸರಾದ ಬಹಮನಿ ಮತ್ತು ಬರೀದಶಾಹಿಗಳ ಆಳ್ವಿಕೆ ಬೀದರ ಜಿಲ್ಲೆಯಲ್ಲಿ ಆಳಿದ್ದು ನೋಡುತ್ತೇವೆ.

ಭೌಗೋಳಿಕ ದಖ್ಖನ್ನಿನ ಮಧ್ಯದಲ್ಲಿರುವ ಬೀದರ ಜಿಲ್ಲೆ ಅನೇಕ ಸಂಸ್ಕೃತಿಗಳ ಸಂಗಮ ಜೈನ ಧರ್ಮವು ಚಂದ್ರಗುಪ್ತ ಮೌರ್ಯನೊಂದಿಗೆ ಕ್ರಿ.ಪೂ. 298ಕ್ಕೆ ಮೊದಲೇ ದಕ್ಷಣದತ್ತಾ ಹರಡಿತ್ತು. ಆ ವೇಳೆಗಾಗಲೇ ನಂದರ ಆಧೀನದಲ್ಲಿದ್ದ ದಖ್ಖನ್ನಿನ ಭಾಗವು ಮೌರ್ಯರಿಗೆ ಪ್ರಾಪ್ತವಾಯಿತು. ಅಶೋಕನ ಶಾಸನಗಳು ಮಸ್ಕಿ ಮುಂತಾದ ಕಡೆಗಳಿರುವಂತೆ ಬೀದರ ಜಿಲ್ಲೆಯಲ್ಲಿ ದೊರೆತಿಲ್ಲ. ಮೌರ್ಯ ಸಾಮ್ರಾಜ್ಯ ಅವನತಿಗೊಂಡಂತೆ ದಖ್ಖನ್ನಿನಲ್ಲಿ ಶಾಂತವಾಹನರು ಪ್ರಾಬಲ್ಯ ಪಡೆದರು ? (ರಿಷ್ಠಿಕ ಭೋಜಕರನ್ನು ತಮ್ಮ ಆಧೀನಗೊಳಿಸಿ ಪ್ರತಿಷ್ಠಾನ ಪುರ ಇಂದಿನ ಮಹಾರಾಷ್ಟ್ರದ ಪಠಣ) ವನ್ನು ತಮ್ಮ ರಾಜ್ಯಧಾನಿಯನಾಗಿಸಿಕೊಂಡರು. ಬೀದರ ಜಿಲ್ಲಾ ಭಾಗವು ಮಹಾರಾಷ್ಟ್ರದ ಪಠಣ ಮತ್ತು ಆಂದ್ರ ಪ್ರದೇಶದ ಕೊಂಡಪುರ ಇವುಗಳ ನಡುವೆ ಬರುತ್ತದೆ. ಕ್ರಿ.ಶ. ಒಂದನೆ ಶತಮಾನದ ವೇಳೆಗೆ ಶಾಂತವಾಹನರ ಸಾಮ್ರಾಜ್ಯವು ವಿದರ್ಭದಿಂದ ಬನವಾಸಿಯವರೆಗೂ ವಿಸ್ತರಗೊಂಡಿತ್ತು.

## ವಿದರ್ಭದ ಬೀದರ

ಬೀದರ ಭೌಗೋಳಿಕವಾಗಿ ವಿದರ್ಭದ ಭಾಗವಾಗಿ ಗುರುತಿಸಲ್ಪಡುತ್ತದೆ. ಪೌರಾಣಿಕ ಕಾಲದಲ್ಲಿ ಭೀಷ್ಮಕನು ವಿದರ್ಭದ ಅರಸನಾಗಿದ್ದನು. ಶ್ರೀ ಕೃಷ್ಣನು ಭೀಷ್ಮಾಕನ ಮಗಳಾದ ರುಕ್ಮಿಣಿಯನ್ನು ಮದುವೆ ಆದನು ಹಾಗೂ ಕುಂದಿನ ನಗರವೆ ಇಂದಿನ ಬೀದರ ಎನ್ನುವುದು. ನಂದಲಾಲ ಡೇ ಅವರ ಅಭಿಪ್ರಾಯ ಆಗಿದೆ.

ವಿದರ್ಭದ ಮೂಲ ನಿವಾಸಿಗಳೆಂದರೆ ಭೋಜರು. ಅವರನ್ನು ಆಧಿಕತೆಗೆದು ಕೊಂಡವರು ಶಾಂತವಹನರು. ಕ್ರಿ.ಶ. ಮೂರನೇ ಶತಮಾನದ ಉತ್ತರಾರ್ಧದಲ್ಲಿ ಶಾತವಾಹನರ ಅವನತಿಯಾಗಿ

ದಕ್ಷಿಣದ ಕುಂತಳದಲ್ಲಿ ಅಧಿಕಾರಕ್ಕೆ ಬಂದರು. ಕುಂತಳದ ಉತ್ತರದಲ್ಲಿಯ ವಿದರ್ಭದಲ್ಲಿ ವಾಕಾಟಕರು ಶಾಂತವಾಹನರನ್ನು ತಳ್ಳಿ ಪ್ರಾಬಲ್ಯತೆ ಬಂದರು. ಉತ್ತರ ಭಾರತದಲ್ಲಿ ಸಮುದ್ರ ಗುಪ್ತನು ಅಧಿಕಾರಕ್ಕೆ ಬಂದಿದ್ದನು. ಸಮುದ್ರ ಗುಪ್ತನ ಮಗ ಚಂದ್ರಗುಪ್ತ ವಿಕ್ರಮಾದಿತ್ಯನು ಮದುವೆಯಾದದ್ದು, ನಾಗ ವಂಶದ ಕುಬೇರ ನಾಗಳನ್ನು ಅವರ ಮಗಳಾದ ಪ್ರಭಾವತಿ ಮದುವೆಯಾದದ್ದು, ವಾಕಾಟಕ ರುದ್ರ ಸೇನನೊಂದಿಗೆ ಚಂದ್ರ ಗುಪ್ತನ ನರೇಂದ್ರ ಸೇನ ಮದುವೆಯಾದದ್ದು, ಬನವಾಸಿಯ ಕದಂಬ ಅರಸ ಕಾಕುತ್ಸವರ್ಮ ಮಗಳನ್ನು ಹೀಗೆ ಕ್ರಮವಾಗಿ ಉತ್ತರ ಮಧ್ಯ ಮತ್ತು ದಕ್ಷಿಣದ ಪ್ರಮುಖ ರಾಜ ಮನೆತನಗಳಾಗಿದ್ದ ಗುಪ್ತ ಕಾಟಕ ಮತ್ತು ಕಂದಬರ ನಡುವೆ ಸಂಬಂಧಗಳು ಏರ್ಪಟ್ಟಿದ್ದವು.

ಕ್ರಿ.ಶ. ಐದನೆ ಶತಮಾನದ ವೇಳೆಗೆ ಬೀದರ ಪ್ರದೇಶವು ಕುಂತಳ ವಿಷಯದ ಅಟ್ಟಳೆ ನಾಡು ಎಂದೆನಿಸಿಕೊಳ್ಳಲಾರಂಭಿಸಿದ್ದಿತು. ಅಲ್ಲದೇ ಬನವಾಸಿಯ ಕದಂಬರಿಗೆ ಸೇರಿದ ಈ ಪ್ರದೇಶವನ್ನು ವಾಕಾಟಕರು ವಶಪಡಿಸಿಕೊಳ್ಳಲು ಪ್ರಯತ್ನಿಸಿದ್ದುಂಟು ಹಿಂದೂಮತಾವಲಂಬಿಗಳಾದ ಕಂದಬರು ಜೈನರು ಕಾಳಮುಖರು ಗೊರವರು. ಕಾಪಾಲಿಕರು ಶೈವರು ವೈಷ್ಣವರು ರಾಜಾಶ್ರಯ ಪಡೆದಿದ್ದರು. ದೇವಿ ಆರಾಧನೆ ಆರಂಬಗೊಂಡಿದ್ದಿತು ಬೀದರ ಜಿಲ್ಲೆಯ ಹಿನ್ನೆಲೆ ಇದಕ್ಕೆ ಹೊರತಾದದ್ದೆಂದೆನಿಸುವುದಿಲ್ಲ.

ಹೀಗಾಗಿ ಬೀದರಿನ ಇತಿಹಾಸ ಹಾಗೂ ಸಂಸ್ಕೃತಿಯ ಹಿನ್ನೆಲೆಯನ್ನು ಅರಿಯ ಬಯಸುವವರು ಈ ಅಂಶಗಳನ್ನು ಗಮನಿಸಬೇಕಾದದ್ದು ಅಗತ್ಯವಾಗಿದೆ.

ಕ್ರಮವಾಗಿ ನಂದರು ಮೌರ್ಯರು ಶಾಂತವಾಹನರ ನಂತರ ಪ್ರಬಲರಾದ ರಾಷ್ಟ್ರಕೂಟರು ಮಾನ್ಯಖೇಟ (ಮಳಖೇಡ) ದಿಂದ ಕ್ರಿ.ಶ. 8ನೇ ಶತಮಾನದಿಂದ 10ನೇ ಶತಮಾನದ ವರೆಗೆ ಆಳಿದರು ಇವರು ತಮ್ಮನ್ನು ಲಟ್ಟಲೂರ (ಇಂದಿನ ಲಾತೂರಿ)ನ ಪುರವರದಿಶ್ವರರೆಂದು ಕರೆದುಕೊಂಡಿದ್ದಾರೆ. ಇವರು ರಟ್ಟರು ಬಾದಮಿ ಚಾಳುಕ್ಯರ ಸಾಮಾಂತರಾಗಿದ್ದರು. ಇವರ ಕಾಲಕ್ಕೆ ಬೀದರ ತಾಲೂಕಿನ ಕಮಠಾಣ ಜೈನರ ಕೇಂದ್ರವಾಗಿತ್ತು. ಬಸವ ಕಲ್ಯಾಣ ತಾಲೂಕಿನ ಮೊರಖಂಡಿ ( ಮಯೂರ ಖಂಡಿ ) ಕೆಲಕಾಲ ಅವರ ರಾಜ್ಯಧಾನಿಯಾಗಿತ್ತೆಂದು ತಿಳಿದು ಬಂದಿದೆ.

## ಕಲ್ಯಾಣ ಚಾಲುಕ್ಯರು

ಕ್ರಿ.ಶ. 973ರಲ್ಲಿ ಚಾಲುಕ್ಯರ 3ನೇ ಎರಡನೆ ತೈಲಪ್ಪ ರಾಷ್ಟ್ರಕೂಟದ ಕೊನೆಯ ಅರಸ 3ನೇ ಎರಡನೆ ಕರ್ಕನನ್ನು ಸಂಹರಿಸಿದ. ಕಲ್ಯಾಣದ ನಗರ ನಿರ್ಮಾಣಗೊಳಿಸಿ ರಾಜ್ಯಧಾನಿಯನ್ನಾಗಿಸಿದವನು ಅದೇ ವಂಶದ ಒಂದನೆಯ ಸೋಮೇಶ್ವರ ಅಹವಮ್ಮಲ್ಲನು.

ಕ್ರಿ.ಶ. 1068ರಲ್ಲಿ ಪಟ್ಟಕ್ಕೆ ಬಂದ ಎರಡನೇಯ ಸೋಮೇಶ್ವರನ್ನು ಅಷ್ಟೊಂದು ಸಮರ್ಪಕನಾಗಿರಲಿಲ್ಲವಾದ್ದರಿಂದ ಆತನ ಸೋದರ ಆರನೆ ವಿಕ್ರಮಾದಿತ್ಯನು ಕ್ರಿ.ಶ. 1076ರಲ್ಲಿ

ಪಟ್ಟಕ್ಕೇರಿದನು. ಈತನ ಆಳ್ವಿಕೆಯ ಕಾಲದಲ್ಲಿ ಬರೆಸಲ್ಪಟ್ಟ ಶಾಸನಗಳು ಅನೇಕ ಅವುಗಳಲ್ಲಿ ಒಂದಾದ ರಂಜೇರುವಿನ ಸಿಂದರ ಶಾಸನ ಈ ಭಾಗದ ಇತಿಹಾಸದ ದೃಷ್ಟಿಯಿಂದ ಮಹತ್ವದು.

ಕಲ್ಯಾಣ ಚಾಳುಕ್ಯರ ಆಳ್ವಿಕೆಯ ಕಾಲಕ್ಕೆ ಅದರಲ್ಲೂ 6ನೇ ವಿಕ್ರಮಾದಿತ್ಯನ ಆಳ್ವಿಕೆಯ ಕಾಲದಲ್ಲಿ ಚಾಳುಕ್ಯ ಸಾಮ್ರಾಜ್ಯವು ಉನ್ನತಿಯ ಸಮೃದ್ಧಿಯ ಶಿಖರಕ್ಕೆರಿತ್ತು. ಆಡಳಿತ ವ್ಯವಸ್ಥೆಗೆ ವ್ಯವಸ್ಥಿತ ರೂಪದೊರೆತಿತ್ತು. ಕಲೆ, ಸಾಹಿತ್ಯ, ಶಿಲ್ಪ, ಮುಂತಾದವುಗಳಿಗೆ ಪುಟ ದೊರೆಯಿತ್ತು.

ಬೀದರ ಜಿಲ್ಲೆಯಲ್ಲಿರುವ ಜಲಸಂಗಿಯ ಸಾಹಿತ್ಯ ರಚನೆಯಾಯಿತು. ಬಿಲ್ಹಣ ವಿಕ್ರಮಾಂಕ ಚರಿತೆ ಬರೆದರೆ. ಮಿತಾಕ್ಷರ ಸಂಹಿತ ಎಂಬ ಹಿಂದೂ ನ್ಯಾಯಶಾಸ್ತ್ರ ಗ್ರಂಥವನ್ನು ರಚಿಸಿದ ವಿಜ್ಞಾನೇ ಶ್ವರನೋ ಇವನ ಆಶ್ರಯ ಪಡೆದಿದ್ದನು ವಿಜ್ಞಾನೇಶ್ವರ ಕಲ್ಯಾಣವನು ಕುರಿತು ಕ್ಷಿತಿತಲದಲ್ಲಿ ಕಲ್ಯಾಣದಂಥ ನಗರ ಹಿಂದಿರಲಿಲ್ಲ. ಮುಂದಿರಲಾರದು. ವಿಕ್ರಮಾಂಕನಂಥ ದೊರೆಯನ್ನು ಕಂಡಿಲ್ಲ ಕೇಳಿಲ್ಲ, ಎಂದು ಹೇಳುತ್ತಾನೆ. ಕಲೆಗಳು ಬೆಳೆದು ಬಂದವು. ಬೀದರ ಜಿಲ್ಲೆಯ ಗೊರಟಾ ಗ್ರಾಮವು ಕಲ್ಯಾಣ ಚಾಳುಕ್ಯರ ಕಾಲಕ್ಕೆ ಆಗ್ರಹಾರವಾಗಿತ್ತಲ್ಲದೆ ಶಿಕ್ಷಣ ಕೇಂದ್ರವಾಗಿತ್ತೆಂದು ಅಲ್ಲಿ ದೊರೆತಿರುವ ಶಾಸನಗಳಿಂದ ತಿಳಿದು ಬರುತ್ತದೆ.

## ಕಲ್ಯಾಣದ ಕಲಚೂರ್ಯರು

ಕಲ್ಯಾಣದ ಚಾಲುಕ್ಯರ ಪ್ರಾಬಲ್ಯ ಇಳಿಮುಖವಾದಾಗ ಅವರೊಂದಿಗೆ ರಕ್ತಸಂಬಂಧಹೊಂದಿದ್ದ ಕಲ್ಯಾಣದ ಕಲಚೂರಿನ ದೊರೆ ಬಿಜ್ಜಳ ಚಾಲುಕ್ಯರನ್ನು ಮೂಲೆಗೊತ್ತಿ ಸ್ವತಂತ್ರವಾಗಿ ಆಳಿಕೆ ನಡೆಸಿದನು. ಇವನ ಕಾಲ ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆಯನ್ನು ಕಂಡ ಚಿರಸ್ಮರಣಿಯವಾದ ಕಾಲವಾಗಿದೆ. ಬಸವೇಶ್ವರರು ಇವನ ಆಸ್ಥಾನದಲ್ಲಿ ಮಹಾಮಂತ್ರಿ ಯಾಗಿದ್ದರು. ವೀರಶೈವ ಧರ್ಮದ ತತ್ವಗಳಿಗೆ ಕಾರ್ಯನ್ವಯಕ ಸ್ವರೂಪವನ್ನು ನೀಡಿ ಲಿಂಗಾಯತ ಧರ್ಮವನ್ನು ಉದಯಿಸಿದರು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ. ಶೋಷಣೆಯನ್ನು ಹೋಗಲಾಡಿಸಲೆತ್ನಿಸಿದರು. ಕಲ್ಯಾಣ, ಸಾಮಾಜಿಕ, ಧಾರ್ಮಿಕ ಚಟುವಟಿಕೆಯ ಕೇಂದ್ರವಾಯಿತು. ನಾನಾ ಕಡೆಗಳಿಂದ ಶರಣ ಶರಣೆಯರು ಕಲ್ಯಾಣದತ್ತ ಧಾವಿಸಿ ಬಂದರು. ಅನುಭವ ಮಂಟಪದ ಸ್ಥಾಪನೆಯಾಯಿತು. ವಚನ ಸಾಹಿತ್ಯ ಬೆಳೆಯಿತು. ಜನಮನನಕ್ಕೆ ನೆಲೆ ದೊರಕಿತ್ತು. ಅಂದಿನ ಆದರ್ಶಗಳು ಇಂದಿಗೂ ಜನರ ಬದುಕಿನಲ್ಲಿ ಹಾಸುಹೊಕ್ಕಾಗಿ ನೆಲೆಸಿವೆ.

## ಮುಸ್ಲಿಮರ ಆಳ್ವಿಕೆ

ಉತ್ತರ ಭಾರತಕ್ಕೆ ಸೀಮಿತವಾಗಿದ್ದ ಮಹಮದೀಯರ ಆಳ್ವಿಕೆ ಮಧ್ಯಯುಗದಲ್ಲಿ ಕರ್ನಾಟಕದಲ್ಲೂ ಪಸರಿಸಿತು. ಇಲ್ಲಿ ಸುಮಾರು ಶತಮಾನಗಳಿಗೂ ಹೆಚ್ಚುಕಾಲದ ಬಹಮನಿ ಮತ್ತು ಇತರ ಮಹಮದೀಯರ

ಆಳ್ವಿಕೆ ಅನೇಕ ಅಂಶಗಳಲ್ಲಿ ಗಮನಾರ್ಹವಾಗಿದೆ. ವಿಜಯನಗರ ಸಾಮ್ರಾಜ್ಯದ ಸಮಕಾಲೀನವಾದ ಈ ಬಹಮನಿ ರಾಜ್ಯ ಸು. 180 ವರ್ಷಗಳು ಅದರ ಪ್ರತಿಸ್ಪರ್ಧಿಯಾಗಿ ನಿಂತು ಅಂದಿನ ರಾಜಕೀಯದಲ್ಲಿ ಪ್ರಾಮುಖ ಪಾತ್ರವಹಿಸಿದ್ದಿತು. ಅವರ ಆಳ್ವಿಕೆ ಕಾಲದಲ್ಲಿ ಕಲೆ-ಸಂಸ್ಕೃತಿ ಮೇಲೂ ಅವರ ಪ್ರಭಾವ ಬೀರಿದರು.

ದೆಹಲಿ ಸುಲ್ತಾನ ಮಹಮ್ಮದ ಬಿನತುಘಲಕ ಅಧಿಕಾರ ರೂಢನಾಗಿದ್ದಾಗ ದಖನ್ ಅವನ ಸಾಮ್ರಾಜ್ಯದ ಒಂದು ಪ್ರಮುಖ ಪ್ರಾಂತ್ಯವಾಗಿತ್ತು. ಬೀದರ ದೇಹಲಿಯಲ್ಲಿ ಆಳುತ್ತಿದ್ದ ಖಿಲ್ಜಿ ಮನೆತನದವರ ವಶಕ್ಕೆ ಮೊದಲು ಹೋದದ್ದು ಕ್ರಿ.ಶ. 1318ರಲ್ಲಿ ಆದರೆ ಕಾಕತೀಯ ಪ್ರತಾಪರುದ್ರನು ಕ್ರಿ.ಶ. 1320ರಲ್ಲಿ ಪುನಃ ವಶಪಡಿಸಿಕೊಂಡನು. ಆದರೆ ಅದು ಬಹಳ ಕಾಲ ಉಳಿಯಲಿಲ್ಲ. ದೇಹಲಿಯ ಘಿಯಾಸುದ್ದೀನ ತುಘಲಕನು ದಖನ್ನಿನ ವೈಸರಾಯ ಆಗಿದ್ದ ತನ್ನ ಮಗ ( ಮಹಮ್ಮದ ಬಿನ್-ತೂಗಲಕ್ ) ನ ನೇತೃತ್ವದಲ್ಲಿ ತೆಲಂಗಾಣದ ಮೇಲೆ ನಡೆಸಿದ ದಾಳಿಯ ಕಾಲಕ್ಕೆ ಬೀದರ ಬಸವ ಕಲ್ಯಾಣ ಕೋಟೆಗಳು 1332 ರಲ್ಲಿ ದೇಹಲಿಯ ಆಳಿಕೆಗೆ ಒಳಪಟ್ಟವು. ಮುಂದೆ ಬೀದರ ಪ್ರಾಂತಿಯ ರಾಜಧಾನಿಯಾಯಿತು.

ಮಹಮ್ಮದ ಬಿನ್ ತಘಲಕ್‌ನು ಮುಲ್ತಾನಿನ ಶಿಹಾಬೊದ್ದೀನನನ್ನು ನುಸರತ ಖಾನ್ ಎಂಬ ಬಿರುದಿನೊಂದಿಗೆ ಬೀದರ ಪ್ರಾಂತದ ಆಡಳಿತವನ್ನು ವಹಿಸಿಕೊಟ್ಟನು. ವಾರ್ಷಿಕ ಒಂದು ಕೋಟಿಯಷ್ಟು ಹಣವನ್ನು ಖಜಾನೆಗೆ ಸಂದಾಯ ಮಾಡುವ ಶರತ್ತನ್ನು ವಿಧಿಸಲಾಗಿತ್ತು. ಆದರೆ ನುಸರತ ಖಾನ ಅದನ್ನು ಪುರೈಸಲಿಲ್ಲ. ಕ್ರಿ.ಶ. 1345ರಲ್ಲಿ ದಂಗೆಯೂ ಎದ್ದು ವಿಫಲನಾದ ಅಧಿಕಾರ ಕಳೆದುಕೊಂಡ ಕೆಲಕಾಲ ಅರಾಜಕತೆ ಏರ್ಪಟ್ಟಿತ್ತು. ಆಮಿರ ಅಲಿ ಎನ್ನುವ ಅಧಿಕಾರಿ ಬೀದರನ್ನು ತನ್ನ ವಶಕ್ಕೆ ತೆಗೆದುಕೊಂಡ ಆದರೆ ಮಹಮ್ಮದ ಬಿನ್ ತಘಲಕ ನಿಂದ ಕಳುಹಿಸಲ್ಪಟ್ಟ ಕುತಲ ಖಾನನಿಂದ ಸೆರೆಹಿಡಿಯಲ್ಪಟ್ಟ. ಬೀದರ ಆ ಕಾಲಕ್ಕೆ ದಖನ್ನಿನ 23 ಪ್ರಾಂತಗಳಲ್ಲಿ ಒಂದು ಆಗಿತ್ತು. ಆಡಳಿತಕ್ಕಾಗಿ ಸಾವಿರ ಹಾಗೂ ನೂರು ಗ್ರಾಮಗಳ ಘಟಗಳನ್ನು ಮಾಡಲಾಗಿತ್ತು. ಅವುಗಳಿಗೆ ಕ್ರಮವಾಗಿ ಹಜಾರಿ ಮತ್ತು ಸದಿ ಅನುತ್ತಿದ್ದರು. ಅಮಿರ, ಎ. ಹಜಾರಿ ಮತ್ತು ಅಮಿರ-ಎ-ಸದ ಅವುಗಳ ಮುಖ್ಯ ಸ್ಥರಾಗಿರುತ್ತಿದ್ದರು. ಮುಂದೆ ದೌಲತಾಬಾದಿನ ರಾಜ್ಯ ಪಾಲ ಮತ್ತು ಸದಾಗಳ ಅಮಿರರುಗಳ ನಡುವೆ ಘರ್ಷಣೆ ಏರ್ಪಟ್ಟಿತ್ತು. ಆಮಿರರುಗಳು ಇಸ್ಮಾಯಿಲ್ ಮುಖ ಎನ್ನುವಾತನನ್ನು ತಮ್ಮ ದಖನಿನ್ನ ಸುಲ್ತಾನನೆಂದು ಆರಿಸಿಕೊಂಡರು. ಓರ್ವ ಅಮೀರ್-ಎ-ಸದ್ ಆಗಿದ್ದ ಹಸನ ಗಂಗೂ (ಜಫರ ಖಾನ) ದೆಹಲಿಯ ಅಧಿಕಾರಿಗಳ ವಿರುದ್ಧ ಸಾಹ ಸಮಯ ರೀತಿಯಲ್ಲಿ ಯಶಸ್ವಿಯಾಗಿ ಹೋರಾಡಿದ ವಯಸಾಗಿದ್ದ ಇಸ್ಮಾಯಿಲ್ ಮುಖ ಹಸನ ಗಂಗೂಗೆ ತನ್ನ ಅಧಿಕಾರ ವಹಿಸಿಕೊಟ್ಟ.

## ಬಹಮನಿ ರಾಜ್ಯ

ಶುಕ್ರವಾರ ಆಗಸ್ಟ 03, 1347 ರಂದು ಹಸನ ಗಂಗೂ ದೌಲತಾ ಬಾದಿನಲ್ಲಿ ಅಲ್ಲಾವುದ್ದಿನ ಹಸನ ಬಹಮನಶಾಹ ಎಂಬ ಪದನಾಮದೊಂದಿಗೆ ಪಟ್ಟಕಟ್ಟಲ್ಪಟ್ಟ. ಆತನು ಗುಲಬರ್ಗಾವನ್ನು ತನ್ನ

ರಾಜಧಾನಿಯನ್ನಾಗಿಸಿಕೊಂಡ ಬೀದರ ಒಂದು ಪ್ರಾಂತವಾಗಿ ಮಾಡಲಾಗಿತು. ಬೀದರ ಮತೋಮ್ಮೆ ಪ್ರಾಂತೀಯ ರಾಜಧಾನಿಯಾಗಿ ಬೆಳೆಯಲಾರಂಬಿಸಿತಲ್ಲದೆ ದಖನ್ನಿನ ಪ್ರಮುಖ ಪಟ್ಟಣಗಳಲ್ಲಿ ಒಂದಾಗಿ ಬೆಳೆಯಿತು.

ಮುಂದೆ ಬಹಮನಿ ವಂಶದ ಸುಲ್ತಾನ ಆಹಮದಶಾಹ ವಲಿಯು ಕ್ರಿ.ಶ. 1429ರಲ್ಲಿ ತನ್ನ ರಾಜಧಾನಿಯನ್ನು ಗುಲಬರ್ಗಾದಿಂದ ಬೀದರಗೆ ವರ್ಗಾಯಿಸಿದನು. ಕ್ರಿ.ಶ. 1429ರಲ್ಲಿ 1432ರ ವರೆಗೆ ಕೋಟೆಯ ಕಟ್ಟಡದ ಕಾರ್ಯವನ್ನು ಕೈಕೊಳ್ಳಲಾಯಿತು.

ಕ್ರಿ.ಶ. 1453ರಲ್ಲಿ ಗಿಲಾನನಿಂದ ಉದ್ಯೋಗ ಅರಸುತ್ತ ಬೀದರಿಗೆ ಬಂದ ಮಹಮ್ಮದ ಗವಾನನ್ನು ಕ್ರಮೇಣ ಪ್ರಧಾನ ಮಂತ್ರಿಯ ಹುದ್ದೆಗೇರಿದನಲ್ಲದೆ ಬಹಮನಿ ಮನೆತನಕ್ಕೆ ಆಗಾಧ ಸೇವೆಯನ್ನು ಸಲ್ಲಿಸಿದನು. 1472ರಲ್ಲಿ ವಿದ್ಯಾಪ್ರೇಮಿಯಾಗಿದ್ದ ಗವಾನ ಮದರಸಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದನು. ಅದೇ ಸಮಯದಲ್ಲಿ ರಷ್ಯಾದಿಂದ ಅಥೆನೇಷಿಯಸ್ ನಿಕಿಟನ್ ಎಂಬ ಪ್ರವಾಸಿಯು ಬೀದರಿಗೆ ಬಂದಿದ್ದನು. ಲಭ್ಯವಿರುವ ಆತನ ದಿನಚರಿ ಆ ಕಾಲದ ಮಹತ್ವದ ಮಾಹಿತಿಯನ್ನು ನೀಡುತ್ತದೆ. ಮತ್ತು ಬೀದರ ಹಂತ ನಗರ ಹಿಂದುಸ್ತಾನದಲ್ಲಿ ಎಲ್ಲೂ ಇಲ್ಲ ಎಂದು ಹೆಳುತ್ತಾನೆ. 9 ಮತ್ತು 10 ಏಪ್ರಿಲ್, 5. 1480ರಂದು ಒಳಸಂಚಿನಿಂದಾಗಿ ಮಹಮ್ಮದ ಗವಾನನ್ನ ನಿರ್ಮಮ ಹತ್ಯೆ ಜರುಗಿತು. ಅಂದಿನಿಂದ ಬಹಮನಿ ಸಾಮ್ರಾಜ್ಯ ಅವನತಿಯತ್ತ ಸಾಗಿತ್ತು. ಪ್ರಧಾನಿಮಂತ್ರಿ ಕಾಸಿಂ ಬರೀದನು ಅಧಿಕಾರವನ್ನು ಕ್ರಮೇಣ ತನ್ನ ಕೈಯಲ್ಲಿ ತೆಗೆದು ಕೊಂಡನು. ಅದು ವರೆಗೆ ಬಹಮನಿ ಸಾಮ್ರಾಜ್ಯದ ಭಾಗವಾಗಿದ್ದ ಗೋವೆಯನ್ನು 25.11.1510 ರಂದು ಪೋರ್ಚುಗಿಸರು ಆಕ್ರಮಿಸಿಕೊಂಡರು.

1490 ರ ವೆಳೆಗೆ ಬಹಮನಿ ಸಾಮ್ರಾಜ್ಯವು ಶಿಥಿಲಗೊಂಡು ಬಿಜಾಪುರ, ಬೆರಾರ, ಅಹಮ್ಮದನಗರ, ಗೋಲಕೊಂಡ ಮತ್ತು ಬೀದರ ಈ ಐದು ಚಿಕ್ಕ ಚಿಕ್ಕ ರಾಜ್ಯಗಳಾಗಿ ಒಡೆದುಹೋಯಿತು. ಅವರೆಲ್ಲ ಅರಸರು ಒಂದು ಗೂಡಿ ವಿಜಯನಗರದ ಅರಸ ರಾಮರಾಯನನ್ನು ತಾಳಿಕೊಟೆ ಯುದ್ಧದಲ್ಲಿ ಜನವರಿ 23.1565ರಲ್ಲಿ ಸೋಲಿಸಿದರು.

ಕ್ರಮೇಣ ಪ್ರಾಬಲ್ಯ ತಳೆದ ಬಿಜಾಪುರದ ಅಧಿಲಾಶಾಹಿ ಸುಲ್ತಾನರು ಬೀದರನ ಬರೀದ ಶಾಹಿಗಳನ್ನು ಸೋಲಿಸಿ ಅದನ್ನು ಬಿಜಾಪುರದ ಅಧಿನಗೊಳಿಸಿದರು. ಮುಂದೆ 1656ರಲ್ಲಿ ದಖನ್ನಿನಲ್ಲಿ ವೈಸರಾಯ ಆಗಿದ್ದ. ಔರಂಗಜೇಬನು ಬೀದರನ್ನು ಗೆದ್ದುಕೊಳ್ಳುವ ವರೆಗೆ ಈ ಭಾಗವು ಬಿಜಾಪುರದ ಅರಸರ ಅಧೀನದಲ್ಲಿತ್ತು. ಕ್ರಿ.ಶ. 1656 ರಿಂದ ಕ್ರಿ.ಶ. 1724 ರಲ್ಲಿ ಅಸಫಜಾಹನು ಸ್ವಾತಂತ್ರ ಘೋಷಿಸಿಕೊಳ್ಳುವ ವರೆಗೆ ಬೀದರ ಮೊಗಲ್ ಸಾಮ್ರಾಜದ ಭಾಗವಾಗಿತ್ತು. ದೇಹಲಿಯಿಂದ ಕಳುಹಿಸಲ್ಪಟ್ಟ ರಾಜ್ಯಪಾಲರುಗಳು ಬೀದರಿನಿಂದ ಆಳುತ್ತಿದ್ದರು. ಬೀದರ ಮೊಗಲರ ದಖನಿನ್ನ ಆರು ಆಡಳಿತ

ವಿಭಾಗಗಳಲ್ಲಿ ಒಂದಾಗಿದ್ದಿತು. 1713ರ ಸುಮಾರಿಗೆ ಭಾಲ್ಕಿಯನ್ನು ಮರಾಠಾ ಚಂದ್ರಸೇನ ಜಾದವನಿಗೆ ಜಾಗೀರ ಆಗಿ ನೀಡಲ್ಪಟ್ಟಿತ್ತು.

ಆಸಫ ಜಾಹಿ ಮನೆತನದ ಆಳ್ವಿಕೆ 1713ರಲ್ಲಿ ಕಮರುದ್ದೀನ ಬೀನ, ಕ್ವಿ ಲಿಚ್, ಖಾನ್ ದಖನ್ನಿನ ವೈಸರಾಯ ಆಗಿದ್ದನು. ಮುಂದೆ 1724ರಲ್ಲಿ ನಿಜಾಮ ಉಲ್ ಮುಲ್ಕನು ಮೂಗಲರಿಂದ ಸ್ವತಂತ್ರಗೊಂಡು ಅಸಫಜಾಹಿ ಮನೆತನವನ್ನು ಸ್ಥಾಪಿಸಿದನು. ಆತನ ತನ್ನ ಅಳಿಯನಾದ ನವಾಬ ಮಿರ್ ಕಲಂದಖಾನನಿಗೆ ಬಸವಕಲ್ಯಾಣವನ್ನು ಜಾಗೀರ ಆಗಿ ನೀಡಿದನು 1748 ರಿಂದ ಫೆಂಚರು ಮತ್ತು ಇಂಗ್ಲೀಷರು ಹೈದರಬಾದಿನ ರಾಜಕೀಯದಲ್ಲಿ ಮಹತ್ವ ಪಾತ್ರ ವಹಿಸಿದರು. ಬರು ಬರುತ ಇಂಗ್ಲೀಷರು ಪ್ರಭಾವಶಾಲಿಗಳಾಗಿದರು. ಮಹಮ್ಮದಬಾದ ಬೀದರ ನೈಜಾಂ ರಾಜ್ಯದ ಆರು ಪ್ರಾಂತಗಳಲ್ಲಿ ಒಂದಾಗಿತ್ತು. ಅಸಫ ಜಾಹಿಗಳ ಮಿಲಿಟರಿ ಪ್ರತಿನಿಧಿ ರಾಜ್ಯಪಾಲನು ಪ್ರಾಂತದ ಆಡಳಿತ ನೋಡಿಕೊಳ್ಳುತ್ತಿದ್ದನು. ಕ್ರಿ.ಶ. 1846ರಲ್ಲಿ ನೈಜಾಂ ರಾಜ್ಯದಲ್ಲಿ ಮಿಲಿಟರಿ ಗೌವ್ಹರ್ನರಗಳ ಮೂಲಕ ಆಳ್ವಿಕೆ ಸ್ಥಗಿತಗೊಳಿಸಿ ಅದರ ಬದಲಿಗೆ ಜಿಲ್ಲೆ ಮತ್ತು ವಿಭಾಗಗಳನ್ನು ರಚಿಸಲಾಯಿತು. ಬೀದರ ಕ್ರಿ.ಶ. 1846 ರಿಂದ 1905ರ ವರೆಗೆ ವಿಭಾಗೀಯ ಕೇಂದ್ರವಾಗಿತು. 1905 ರಿಂದ ಜಿಲ್ಲಾ ಕೇಂದ್ರವಾಗಿ ಉಳಿಯಿತು.

ಇದು ಬೀದರ ಜಿಲ್ಲೆ ನಡೆದು ಬಂದ ದಾರಿ ಆಗಿದೆ. ಇಷ್ಟೆಲ್ಲಾ ನೋಡಿದರೆ ಬೀದರ ಜಿಲ್ಲೆ ಎರಡು ರಾಜ್ಯ ಮನೆತನಗಳಲ್ಲಿ ಹೆಮ್ಮೆಯ ನಾಡಾಗಿ ಮೆರೆದಿದೆ. ಕಲ್ಯಾಣ ಚಾಲುಕ್ಯ, ಬಹಮನಿ ಅರಸರ ಕಾಲದಲ್ಲಿ ಬೀದರ ಜಿಲ್ಲೆ ಸುವರ್ಣದ ಯುಗವಾಗಿತು. ಜಗತ್ಪಸಿದ್ದಿ ಪಡೆದಿತ್ತು. ಅವರ ಕಾರ್ಯ ಸಾಧನೆ ಇಂದು ಕೂಡ ನೋಡಬಹುದು. ಕಲೆ ಸಾಹಿತ್ಯದಲ್ಲಿ ಶ್ರೇಷ್ಠತೆ ಹೊಂದಿದೆ. ಅಂದಿನ ರಾಜವಂಶಗಳಿಲ್ಲದಿದ್ದರು ಅಂದಿನ ಕಲಾ ಸಿರಿವಂತಿಕೆ ಮಂದಿರ ಮಜ್ಜಿದ ಕಟ್ಟಡ ಇತಿಹಾಸದ ಸಾಕ್ಷಿ ಸಂಕೇತಗಳಾಗಿ ಬೀದರ ಜಿಲ್ಲೆಯಲ್ಲಿ ಇಂದು ಕೂಡ ನೋಡಬಹುದು.

## ಆದರ ಗ್ರಂಥಗಳು


1. ಬೀದರ ಜಿಲ್ಲಾ ದರ್ಶನ ಡಾ।। ಜಗನ್ನಾಥ ಹೆಬ್ಬಾಳೆ (ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಬೀದರ - 585 401.)
2. ಬೀದರ ಜಿಲ್ಲಾ ಸ್ವಾತಂತ್ರ ಹೋರಾಟಗಾರರು ಪ್ರೋ. ವೀರೇಂದ್ರ ಸಿಂಪಿ, (ಜಿಲ್ಲಾ ಆಡಳಿತ, ಬೀದರ.)

# ನರಸಿಂಹ ಝುರಣಿ

ನಗರದಿಂದ ದಕ್ಷಣಕ್ಕಿರುವ ಶ್ರೀ ನರಸಿಂಹ ಝುರಣಿ ಬೀದರ ನಗರ ದಿಂದ 2 ಕಿ.ಮಿ. ಅಂತರದಲ್ಲಿದೆ. ಇದು ಗುಹಾಂತರ ದೇವಾಲಯವಾಗಿದೆ. ಸುರಂಗಮಾರ್ಗದಂತಿರುವ ಗವಿಯಲ್ಲಿ ಈ ದೇವಾಲಯ ಅಡಗಿದೆ. ಬೀದರ ಜಿಲ್ಲೆಯಲ್ಲಿ ಅತ್ಯಂತ ಪವಿತ್ರ ಕ್ಷೇತ್ರ ಸ್ಥಳವಾಗಿದೆ. ಹಿರಣ್ಯಕಶ್ಯಪನ ಸಂಹಾರ ಮಾಡಿದ ವಿಷ್ಣು ಆನಂತರದಲ್ಲಿ ಝುರಾಸುರನೆಂಬ ರಕ್ಕಸನನ್ನು ಕೊಂದು ಆ ರಕ್ಕಸನ ಕೊನೆಯ ಇಚ್ಛೆಯ ಪ್ರಕಾರ ಈ ಗುಹೆಯಲ್ಲಿ ನರಸಿಂಹದೇವರು ಬಂದು ನೆಲೆಸಿದ್ದಾನೆಂಬ ಪೌರಾಣಿಕ ಕಥೆ ಇದೆ.

ಪ್ರಾಚೀನ ಕಾಲದಲ್ಲಿ ಈ ಕ್ಷೇತ್ರಕ್ಕೆ ದಂಡಕಾರ್ಣ್ಯ ಕ್ಷೇತ್ರ ಎಂದು ಕರೆಯುತ್ತಿದ್ದರು. ಈ ಸ್ಥಳದಲ್ಲಿ ಮೊದಲು ದೈತ್ಯ (ಅಸುರ) ಇರುತ್ತಿದನು. ಇತನ ಹೆಸರು ''ಝುರಾಸುರ'' ಆಗಿತ್ತು. ಇತನು ಶಿವನ ಭಕ್ತನಾಗಿದ್ದನು. ತನ್ನ ಭಕ್ತಿಯಿಂದ ಶಿವನನ್ನು ಮೇಚ್ಚಿಸಲು ಆತನು ಒಂದು ಸುಂದರವಾದ ಪರ್ವತವನ್ನು ಆಯ್ಕೆ ಮಾಡಿಕೊಂಡನು. ಅಲ್ಲಿ ಒಂದು ಗವಿ ಮಾಡಿದನು. ಆತನು ಆ ಗವಿಯನ್ನು ತನ್ನ ಕೈ ಬೆರಳಿನ ಉಗುರುಗಳಿಂದ ಕ್ಷಣದಲ್ಲಿ ಕೇದರಿ ಮಾಡಿದನು. ನಂತರ ಆ ಗವಿಯಲ್ಲಿ ಶಿವನ ಆರಾಧನೆ ಮಾಡಲು ಹತ್ತಿದ್ದನು. ಇತನ ಭಕ್ತಿಗೆ ಮೆಚ್ಚಿ ಇತನ ಆರಾಧನೆಗೆ ಶಿವನು ಮೆಚ್ಚಿ ಈ ಗುಹೆಯಲ್ಲಿ ಪ್ರತ್ಯಕ್ಷನಾದನು. ತನ್ನ ಭಕ್ತನಾದ ಝುರಾಸುರನಿಗೆ ಶಿವನು ನಿನಗೆ ಬೇಕಾದ ವರವನ್ನು ಕೇಳು ನಾನು ಕೊಡುತ್ತೇನೆ ಎಂದನು. ಆಗ ಝುರಾಸುರನು. ಶಿವನಿಂದ ವರವನ್ನು ಕೇಳಿ ಪಡೆದನು. ಶಿವನ ವರದಿಂದ ಝುರಾಸುರ ಶಕ್ತಿವಂತನಾಗಿ ಶಿವಭಕ್ತನಾದ ಕಾರಣ ಹರಿ ಭಕ್ತರ ಮೇಲೆ ಅತ್ಯಾಚಾರ ಮಾಡುತ್ತಿದ್ದನು. ಅಸುರನಾದ ಕಾರಣ ಅಲ್ಲಿ ಪ್ರತಿದಿನ ರಾತ್ರಿ ಹಗಲು ಹರಿಭಕ್ತರ ಮೇಲೆ ಅತ್ಯಚಾರ ಮಾಡಲು ಪ್ರಾರಂಭಿಸಿದ. ಎಲ್ಲ ಹರಿ ಭಕ್ತರು ಆತನ ಅತ್ಯಾಚಾರಕ್ಕೆ ಚಿಂತಿಸಿದರು. ಅವರಿಗೆ ಆಕಾಶದಿಂದ ಒಂದು ಧ್ವನಿ ಕೇಳಿ ಬಂತು. ಚಿಂತಿಸಬೇಡಿ, ನಿಮ್ಮನ್ನು ರಕ್ಷಿಸಲು ಶ್ರೀ ವಿಷ್ಣು ಬರುತ್ತಾನೆ. ಆತನ ಪ್ರಾರ್ಥನೆ ನೀವು ಸದಾಮಾಡಿರಿ ಎಂದು ಕೇಳಿಬಂದಿತ್ತು ಅದರಿಂದ ಎಲ್ಲ ಭಕ್ತರು ಶ್ರೀ ಹರಿವಿಷ್ಣುವಿನ ಪ್ರಾರ್ಥನೆ ಮಾಡಿದರು ಇವರ ಪ್ರಾರ್ಥನೆ ಶ್ರೀ ವಿಷ್ಣು ಕೇಳಿ. ವಿಷ್ಣು ದೇವರು ಈ ದೈತ್ಯ ಝುರಾಸುರನ ಅತ್ಯಾಚಾರಕ್ಕೆ ಕ್ರೋಧಗೊಂಡು ಆಗ ಶ್ರೀ ಹರಿ ವಿಷ್ಣುದೇವರು ಚತುರ್ಥ ಅವತಾರ ಶ್ರೀ ನರಸಿಂಹ ಅವತಾರ ಧಾರಣ ಮಾಡಿದರು ಮತ್ತು ಹಿರಣ್ಯ ಕಶ್ಯಪನನ್ನು ಸಂಹಾರ ಮಾಡಿದರು. ಅದೆ ಅವತಾರದಲ್ಲಿ ಅದೆ ಸಮಯದಲ್ಲಿ ಈ ಗವಿಯಲ್ಲಿ ನರಸಿಂಹ ದೇವರು ಪ್ರಕಟವಾದರು. ಯಾವಾಗ ಆ ಗವಿಯಲ್ಲಿ ನರಸಿಂಹ ದೇವರು ಪ್ರಕಟವಾದರು. ಅದೆ ಸಮಯದಲ್ಲಿ ಝುರಾಸುರ ಶಿವನ ಆರಾಧನೆ ಮಾಡುತ್ತಿದನು. ಝುರಾಸುರನ ಆರಾಧನೆ ಪೂರ್ಣಗೊಂಡ ನಂತರ ನರಸಿಂಹ ದೇವರು ಆತನಿಗೆ ಅಂದರು.

"ನಾನು ಸಮಸ್ತ ಅಸುರ ಜಾತಿಯ ಅಂತ್ಯ ಮಾಡುತ್ತಿದ್ದೇನೆ ನಾನು ನಿನ್ನ ಕೂಡ ಅಂತ್ಯ ಮಾಡುತ್ತೇನೆ ಎಂದರು" ಝುರಾಸುರ ಶಿವನ ವರದಿಂದ ಶಕ್ತಿವಂತನಾಗಿದನು. ನರಸಿಂಹ ದೇವರು ಝುರಾಸುರನ ಮೇಲೆ

ಯುದ್ಧ ಪ್ರಾರಂಭಿಸಿದರು. ಯುದ್ಧ ಮಾಡಿ ಝುರಾಸುರನನ್ನು ಸೋಲಿಸಿದರು. ಝುರಾಸುರನ ಸೋಲಿಗೆ ಕಾರಣ ಆತನು ಮಾಡಿದ ಪಾಪದ ಕಾರ್ಯವೆಂದರೆ ಹರಿಭಕ್ತರ ಅತ್ಯಚಾರ ಅಂತ್ಯ. ಇದು ಒಂದೆ ಆತನ ತಪ್ಪು ಕಾರ್ಯ ಆಗಿತ್ತು. ಝುರಾಸುರನ ಪುಣ್ಯಕಾರ್ಯವೆಂದರೆ ಶಿವನ ಭಕ್ತಿ ಆಗಿತ್ತು. ಶಿವನ ಭಕ್ತಿ ಆತನನ್ನು ಯಾವಾಗಲು ಕಾಪಾಡುತ್ತಿತ್ತು. ಹರಿ ಭಕ್ತರ ಅತ್ಯಚಾರದಿಂದ ಇತನಿಗೆ ಅಂತ್ಯ ಬಂದಿತ್ತು.

ಶ್ರೀ ಹರಿಯು ಝುರಾಸುರನನ್ನು ಸೋಲಿಸಿ, ನಂತರ ಶಿವನ ಭಕ್ತನಾದ ಕಾರಣ ಆತನನ್ನು ಶ್ರೀ ಹರಿವಿಷ್ಣು ದೇವರು ಝುರಾಸುರನಿಗೆ ''ನಿನ್ನ ಕೋನೆಯ ಇಚ್ಛೆ ಏನಿದೆ ಅದು ನಿನು ನನಗೆ ವರ ಕೇಳು ನಾನು ನಿನ್ನ ಇಚ್ಛೆ ಪೂರ್ಣ ಮಾಡುತ್ತೇನೆ'' ಎಂದರು. ಆಗ ಝುರಾಸುರನು ಶ್ರೀ ನರಸಿಂಹ ದೇವರ ಪಾದ ಹಿಡಿದು ವರ ಕೇಳಿದನು ಏನೆಂದರೆ ''ಎಲ್ಲಿಯ ವರೆಗೆ ಸೂರ್ಯ ಚಂದ್ರ ಇರುವರೊ ಅಲ್ಲಿಯ ತನಕ ತಾವು ಇಲ್ಲಿ ಈ ಸ್ಥಳದಲ್ಲಿ ಸ್ಥಾಪಿತವಾಗಿದ್ದು. ನಿಮ್ಮ ಹೆಸರಿನ ಜೋತೆಯಲ್ಲಿ ನನ್ನ ಹೆಸರು ಅಮರ ಮಾಡಿರಿ'' ಎಂದು ವರ ಕೇಳಿದನು. ಆಗ ನರಸಿಂಹ ದೇವರು ಅತಥಾಸ್ತುಅ ಎಂದರು ಮತ್ತು ಝುರಾಸುರನ ಅಂತ್ಯ ಮಾಡಿದರು. ಆ ಅಸುರರ ರಕ್ತವನ್ನು ನಿರ್ಮಲ ಪಾವನ ನೀರಿನಲ್ಲಿ ಅದೆ ಸ್ಥಳದಲ್ಲಿ ಪರಿವರ್ತನೆ ಮಾಡಿದರು. ಇಲ್ಲಿ ಸೂರ್ಯ ಚಂದ್ರ ಇರುವವರೆಗೆ ಶ್ರೀ ವಿಷ್ಣುದೇವರು ಈ ಗವಿಯಲ್ಲಿ ಸ್ಥಾಪಿತವಾದರು. ಅಂದಿನಿಂದ ಇಂದಿನ ವರೆಗೆ ಇಲ್ಲಿ ಝುರಿ ಸದಾ ಹರಿಯುತ್ತಿದೆ. ಝುರಾಸುರನ ಹೆಸರಿನಿಂದ ಈ ಸ್ಥಳ ''ಝುರಣಿ ನರಸಿಂಹ'' ಕ್ಷೇತ್ರ ಆಯಿತು.

ಶ್ರೀ ವಿಷ್ಣು ಈ ಗವಿಯಲ್ಲಿ ಸ್ಥಾಪನೆ ಆದ ನಂತರ ಆವಾಗ ಮಾಣಿಕ ಪ್ರಭು ಪಾದಯಾತ್ರೆ ಮಾಡುತ್ತ ಬರುತ್ತಿದ್ದರು. ರಾತ್ರಿ ಆದಕಾರಣ ವಿಶ್ರಾಂತಿ ಮಾಡಲು ತನ್ನ ಸಂಗಡಿಗರ ಜೋತೆಗೆ ಆ ರಾತ್ರಿ ಈ ಅರಣ್ಯದಲ್ಲಿ ಉಳಿದು ವಿಶ್ರಾಂತಿ ಮಾಡುತ್ತಿದ್ದರು. ವಿಶ್ರಾಂತಿ ಆದ ನಂತರ ಹೋಗುವ ಸಮಯದಲ್ಲಿ ನಂತರ ಅದೆ ಸಮಯದಲ್ಲಿ ಓಮ್ಮಿಂದ ಒಮ್ಮೇಲೆ ಒಂದು ಸರ್ಪ ಬಂದು ಅವರ ದಾರಿ ತಡೆಯಿತು. ಆ ಸರ್ಪವು ಮಾಣಿಕ ಪ್ರಭು ಮಹಾರಾಜನಿಗೆ ಈ ಗವಿಯ ಕಡೆಗೆ ಕರೆದು ತಂದಿತ್ತು. ಮಾಣಿಕ ಪ್ರಭು ಆ ಸರ್ಪದ ಜೋತೆ ಜೋತೆಯಲ್ಲಿ ಈ ಗವಿಯ ತನಕ ಸರ್ಪ ಮುಂದೆ ಮುಂದೆ ಮಾಣಿಕ ಪ್ರಭು ಅದರ ಹಿಂದೆ ಹಿಂದೆ ಬಂದು ಗವಿಯ ತನಕ ಬಂದು ಮುಟ್ಟಿದರು.

ಆ ಸರ್ಪವು ಶ್ರೀ ಹರಿ ವಿಷ್ಣು ಆಗಿದ್ದರು. ತಮ್ಮ ನಿಜ ರೂಪವನ್ನು ಸಾಕ್ಷತ್ಕಾರ ವಿಷ್ಣುವಿನ ಅವತಾರವನ್ನು ಈ ಗವಿಯ ಒಳಗಡೆ ತಾಳಿದರು. ಇದನ್ನು ಮಾಣಿಕ ಪ್ರಭು ನೋಡಿದರು. ನಂತರ ಶ್ರೀ ವಿಷ್ಣು ಮಾಯವಾದರು. ಇದನ್ನು ಕಂಡು ಮಾಣಿಕ ಪ್ರಭು ಧನ್ಯರಾದರು. ಶ್ರೀ ವಿಷ್ಣುವನ್ನು ಕಂಡು ಕೊಂಡಾಡಿದರು. ನಂತರ ಮಾಣಿಕಪ್ರಭು ಮಹಾರಾಜ ತಮ್ಮ ಅಂತರ ಆತ್ಮದಿಂದ ಅವರು ಗವಿಯ ಒಳಗಡೆ ಕುಂತು 41 ದಿನ ಶ್ರೀ ಹರಿ ವಿಷ್ಣುವಿನ ಪೂಜ್ಯ ಮಾಡಿದರು. ನಂತರ ಇದೆ ಸ್ಥಳದಲ್ಲಿ ಉಳಿದು ಅನೇಕ ವರ್ಷ ತಪಸ್ಸು ಮಾಡಿದರು. ಅವರ ಗದ್ದುಗೆ ಇಂದು ಕೂಡ ಈ ಸ್ಥಳದಲ್ಲಿ ಇದೆ.

ಹೀಗೆ ಒಬ್ಬರಿಂದ ಒಬ್ಬರಿಗೆ ಈ ಘಟನೆ ತಿಳಿದು ಅಂದಿನಿಂದ ಇಂದಿನ ವರೆಗೆ ಈ ಸ್ಥಳ ಪವಿತ್ರ ನರಸಿಂಹ ಕ್ಷೇತ್ರ ಸ್ಥಳವಾಗಿದೆ. ಇಲ್ಲಿ ಇಂದು ಕೂಡ ನೀರಿನ ದೃಶ್ಯ ಕಂಡರೆ ಆಶ್ಚರ್ಯವಾಗುತ್ತದೆ. ಈ ನೀರು ಗವಿಯ ಒಳಗಡೆ ಶ್ರೀ ನರಸಿಂಹ ದೇವರ ಪಾದದ ಕೆಳಗಿನಿಂದಲೆ ಈ ಝರಿ ಉತ್ಪನ್ನವಾಗಿದೆ. ಈ ಝರಿ ಗವಿಯ ಒಳಗಡೆ ದೇವರಿಂದ ಹರಿಯುತ್ತ ಹೊರಗಡೆ ಆಕಳ ಮುಖದಿಂದ ಹರಿಯುತ್ತ ಹೋರಗಡೆ ಹರಿಯುತ್ತವೆ. ಈ ಆಕಳ ಮುಖದಿಂದ ಬರುವ ನೀರಿನಲ್ಲಿ ಜನರು ಸ್ನಾನ ಮಾಡುತ್ತಾರೆ. ಗವಿಯ ಒಳಗಡೆ ಇರುವ ನೀರು ವ್ಯಕ್ತಿಯ ಎದೆಯ ಮಟ್ಟಕ್ಕೆ ಇರುತ್ತವೆ. ಹೆಚ್ಚಿಗೆ ಇರುವದಿಲ್ಲ. ಮಳೆಗಾಲ, ಚಳಿಗಾಲ, ಬೆಸಿಗೆ ಯಾವ ಕಾಲ ಇದ್ದರೂ ನೀರಿನ ಮಟ್ಟ ಅಷ್ಟೆ ಇರತ್ತುದೆ.

ಈ ನೀರಿನಲ್ಲಿ ಕಪ್ಪೆ, ಮೀನು, ಸರ್ಪ ಇವೆ ಎಂದು ಹೇಳುತ್ತಾರೆ. ಯಾರಾದರು ಏನಾದರು ತಪ್ಪು ಮಾಡಿದರೆ ಅವರ ಕಾಲಲ್ಲಿ ಅವು ಬರುತ್ತವೆ ಎಂದು ಹೇಳುತ್ತಾರೆ. ಆದರೆ ಯಾರಿಗೂ ಏನು ಮಾಡುವದಿಲ್ಲ ಹಾಗೂ ಈ ಗವಿಯಲ್ಲಿ ಅನೇಕ ಬಾವುಲಿಗಳಿವೆ. ಇವು ಗವಿಯ ತುಂಬ ಜೋತು ಬಿಳುತ್ತವೆ. ಯಾರಿಗೂ ಏನು ಮಾಡುವದಿಲ್ಲ. ಹಾಗೂ ಗವಿಯ ಒಳಗಡೆ ಆಕ್ಸಿಜನ್ ವ್ಯವಸ್ಥೆ ಮಾಡಲಾಗಿದೆ. ಹಾಗೂ ಗವಿಯ ಒಳಗಡೆ ಅನೇಕ ಲೈಟ್ಸ್‌ಗಳು ಇವೆ. ನೀರಿನ ಒಳಗಡೆಯಿಂದಲೆ ನಡೆದುಕೊಂಡು ಗವಿಯ ಒಳಗೆ ಗರ್ಭಗುಡಿಯ ದೇವರ ತನಕ ಹೊಗಬೇಕಾಗುತ್ತದೆ. ಈ ನೀರು ಸದಾ ಹರಿಯುತ್ತಲೆ ಇರತ್ತುವೆ.

ಇಲ್ಲಿ ದೇವರ ಮೂರ್ತಿ ಮೂರು ಸ್ಥಳದಲ್ಲಿ ಇದೆ.

1) ಗವಿಯ ಒಳಗಡೆ (ಚರಣ ಪಾದುಕೆ)
2) ಗವಿಯ ನೀರಿನ ಹೊರಗಡೆ (ಬಾದಾಮಿ ಆಕಾರದ ಶರೀರ)
3) ನರಸಿಂಹ ದೇವರ ಮುಖ (ದ್ವಾರದ ಹತ್ತಿರ ಹೊರಗಡೆ)

ಗವಿಯ ಹತ್ತಿರದಲ್ಲೆ ಸ್ವಲ್ಪ ಕೆಳಗಡೆ ಮಾಣಿಕ ಪ್ರಭುವಿನ ಗದ್ದುಗೆ ಅವರು ಇದ್ದ ಸ್ಥಳವಿದೆ. ಮತ್ತು ಯಾವ ಸ್ಥಳದಲ್ಲಿ ಸರ್ಪವು ಮಾಣಿಕ ಪ್ರಭುವಿಗೆ ರಸ್ತೆ ತಡೆದಿತ್ತು ಅಲ್ಲಿ ಕೂಡ ಇಂದು ಒಂದು ಸಣ್ಣ ಮಂದಿರ ಇದೆ. ಹಾಗೂ ಮಾಣಿಕ ಪ್ರಭುವಿನ ಗದ್ದುಗೆಯ ಹತ್ತಿರದಲ್ಲೆ ನವಗ್ರಹದ ಸಣ್ಣ ಮಂದಿರವಿದೆ. ಅದರ ಹತ್ತಿರದಲ್ಲೆ ಆಂಜನಯ್ಯನ ಮಂದಿರ ವಿದೆ. ಹಾಗೂ ಈ ಮಂದಿರಗಳ ಸೂತ್ತಲು ನಾಲ್ಕೈದು ಕಲ್ಲಿನ ಲಿಂಗಗಳಿವೆ.

ಅನೇಕ ಕಡೆಯಿಂದ ಅನೇಕ ಜನರು ಈ ಕ್ಷೇತ್ರಕ್ಕೆ ಬರುತ್ತಾರೆ. ಯಾವಾಗಲು ಬರುತ್ತಾರೆ. ಎಲ್ಲ ಜಾತಿ ಜನಾಂಗದವರು ಈ ಕ್ಷೇತ್ರಕ್ಕೆ ಬರುತ್ತಾರೆ. ಇಲ್ಲಿ ಅನೇಕ ಮದುವೆ ಕೂಡ ಆಗುತ್ತವೆ. ಇಲ್ಲಿ ಮಕ್ಕಳ ಜಾವಳ ಕೂಡ ತೆಗೆಯುತ್ತಾರೆ. ಹಾಗೂ ಅನೇಕ ಜನರು ತಮ್ಮ ಹರಕೆ ಹೊತ್ತು ಅದು ಪೂರ್ಣಗೊಂಡ ನಂತರ ಈ ಕ್ಷೇತ್ರಕ್ಕೆ ಬಂದು ತಮ್ಮ ಹರಕೆ ದೇವರಿಗೆ ಮುಟ್ಟಿಸುತ್ತಾರೆ.

ಮದುವೆಯಾದ ನಂತರ ವಧು-ವರರು ಮೊದಲು ಈ ನರಸಿಂಹ ಕ್ಷೇತ್ರಕ್ಕೆ ಬರುವ ರೂಢಿ ಸಂಪ್ರದಾಯ ಇಲ್ಲಿದೆ. ಇಂದು ಕೂಡ ಈ ಸಂಪ್ರದಾಯ ಪರಂಪರೆ ಇದೆ. ಈ ಕ್ಷೇತ್ರಕ್ಕೆ ಮಕ್ಕಳಿಲ್ಲದ ದಂಪತಿಗಳು ಬಂದರೆ ಮಕ್ಕಳಾಗುತ್ತವೆ ಎಂಬ ನಂಬಿಕೆ ಸಂಪ್ರದಾಯ ಇಲ್ಲಿದೆ. ಈ ಗವಿ ತಗ್ಗಿನಲ್ಲಿದೆ. ಗವಿಂಟು ಹತ್ತಿರದಲ್ಲಿ ಕ್ಯಾದಗಿ ಬನವಿತ್ತು. ಇಂದು ಸ್ವಲ್ಪ ವಿದೆ. ಹೊಲ, ಗದ್ದೆ, ಈ ಗವಿಯ ಹತ್ತಿರದಲ್ಲಿದೆ ನೋಡಲು ಇಲ್ಲಿ ಅತ್ಯಂತ ಸುಂದರವಾಗಿದೆ. ಈಲ್ಲಿ ಯಾತ್ರಿಕರು ಸದಾ ಬರುತ್ತಾರೆ. ಸೋಮವಾರ, ಶನಿವಾರ ಹಬ್ಬ ಹುಣ್ಣಿಮೆ ಇದ್ದಾಗ ಜನರು ಮತ್ತಷ್ಟು ಜಾಸ್ತಿ ಈ ಕ್ಷೇತ್ರದಲ್ಲಿ ಇರುತ್ತಾರೆ.

ಈ ಗುಹೆಯಲ್ಲಿರುವ ಕಾಲುವೆಯ ಉದ್ದಳತೆ ಸುಮಾರು 91 ಮೀಟರ ಮತ್ತು 2 ಮೀಟರ ಅಗಲವಾಗಿದೆ. ಕಾಲುವೆಯಲ್ಲಿ 1.37 ಮೀಟರ ದಷ್ಟು ಆಳದಲ್ಲಿ ಸದಾ ಹರಿಯುವ ನೀರು ಇರುತ್ತದೆ.

ಬೀದರ ಜಿಲ್ಲೆಯಲ್ಲಿ ಈ ನರಸಿಂಹ ಕ್ಷೇತ್ರ ಸ್ಥಳವು ಅನೇಕ ಜನರ ಪ್ರೇಕ್ಷಣಿಯ ಸ್ಥಳವಾಗಿದೆ. ಭಕ್ತ ಪವಿತ್ರ ಕ್ಷೇತ್ರ ಸ್ಥಳವಾಗಿದೆ. ಅನೇಕ ಕಡೆಯಿಂದ ಈ ಕ್ಷೇತ್ರ ನೋಡಲು ಬೀದರ ಜಿಲ್ಲೆಗೆ ಅನೇಕ ಕಡೆಯಿಂದ ಜನರು ಬರುತ್ತಾರೆ.

# ಗುರುನಾನಕ ಝರಾ

ಸಿಖ ಧರ್ಮವನ್ನು ಸಾರುವ ಗುರುದ್ವಾರ ಬೀದರ ಜಿಲ್ಲೆಯಲ್ಲಿದೆ. ಇದು ಅತ್ಯಂತ ಭವ್ಯವಾದ ಗುರುದ್ವಾರವಾಗಿದೆ. ಇಲ್ಲಿಗೆ ಅನೇಕ ಕಡೆಯಿಂದ ದೇಶ ವಿದೇಶದಿಂದ ಸಹಸ್ರಾರು ಜನರು ದಿನಾಲು ಬರುತ್ತಾರೆ. ಸಿಖ್ಖ ಜನರ ಪವಿತ್ರವಾದ ಯಾತ್ರಾ ಸ್ಥಳವಾಗಿದೆ. ಹಾಗೂ ಎಲ್ಲ ಜನಾಂಗ-ಜಾತಿಯ ಜನರು ಈ ಗುರುದ್ವಾರಕ್ಕೆ ಬರುತ್ತಾರೆ. ಅಲ್ಲದೆ ಬೀದರ ಜಿಲ್ಲೆಯಲ್ಲಿ ಈ ಗುರುದ್ವಾರ ಇದ್ದಕಾರಣ ಬೀದರ ಜಿಲ್ಲೆಯನ್ನು ಭಾರತದ ಎರಡನೆ "ಪಂಜಾ ಸಾಹೇಬ" ಎಂಬ ಪ್ರತೀತಿಯನ್ನು ಸಹ ಹೊಂದಿದೆ. ಹಾಗೂ ಈ ಭಾಗದ ಮಹಾನತೆ ಎಂದರೆ ಇದೆ. ಸಿಖ್ಖ ಧರ್ಮದ ಪಂಚ ಪ್ಯಾರೆಯವರಲ್ಲಿ ಒಬ್ಬರಾದ ಭಾಯಿ ಸಾಹೇಬಸಿಂಗ ಅವರು ಬೀದರ ನವರಾಗಿದ್ದಾರೆ. ಪಂಚ ಪ್ಯಾರೈಯವರ ಹೆಸರನ್ನು ಪ್ರತಿದಿನ ಅರದಾಸ ಪ್ರಾರ್ಥನೆಯಲ್ಲಿ ಸ್ಮರಿಸಲಾಗುತ್ತದೆ. ಹಾಗೂ ಮಾತಾ ಭಾಗೋಜಿ ಅವರ ಅಂತಿಮ ಅನುಷ್ಠಾನವು ಬೀದರ ಜಿಲ್ಲೆಯ ಜನವಾಡ ಗ್ರಾಮದಲ್ಲಿ ಪ್ರಸಿದ್ಧವಾಗಿದೆ. ಇವೇಲ್ಲದ್ದರಿಂದ ಬೀದರ ಜಿಲ್ಲೆ ಸಿಖ್ಖ ಧರ್ಮದ ಪವಿತ್ರ ಯಾತ್ರಾ ಸ್ಥಳವಾಗಿದೆ.

ಶ್ರೀ ಗುರುನಾನಕ ಜನಿಸುವ ಪೂರ್ವ ಭಾರತ ದೇಶದ ವ್ಯವಸ್ಥೆ ಬಹಳ ಕೆಟ್ಟದ್ದಾಗಿತ್ತು. ಧಾರ್ಮಿಕ ಮತ್ತು ರಾಜಕೀಯದಲ್ಲಿ ಬಹಳ ಕೊಲಾಹಲವೆದ್ದಿತ್ತು. ಆ ಸಮಯದಲ್ಲಿ ಪಂಜಾಬದಲ್ಲಿ ಇನ್ನು ಬಹಳ ಕೆಟ್ಟ ವ್ಯವಸ್ಥೆಯಿತ್ತು. ಪಂಜಾಬ ಜನರಲ್ಲಿ ಮಾನ-ಸನ್ಮಾನ ಮತ್ತು ಏಕತೆ ಇರಲಿಲ್ಲ. ಅವರಲ್ಲಿ ಪ್ರಮುಖವಾಗಿ ಎರಡು ಗುಂಪುಗಳಿದ್ದವು ಒಂದು ಗುಂಪಿನವರು ಅನ್ಯಾಯ ದಬ್ಬಾಳಿಕೆ, ಶೋಷಣೆ ಮಾಡಿ ಜನರನ್ನು ತಲವಾರದಿಂದ ಹೊಡೆದು ಸಾಯಿಸುತ್ತಿದ್ದರು. ಅಂತಹದರಲ್ಲಿ ಭಾರತಿಯರು ಬದುಕುವುದೆ ಕಷ್ಟವಾಗಿತ್ತು. ಇಂತಸ ಸಮಯದಲ್ಲಿ ಭೂಮಿಯ ಮೇಲೆ ಶಾಂತಿ ಕಾಪಾಡಲು ಗರುನಾನಕ ಜನಿಸಿದರು.

## ಗುರುನಾನಕರ ಜೀವನ ಪರಿಚಯ

| | | | |
|---|---|---|---|
| 1) | ಅವತಾರ ಧರಿಸಿದ್ದು | : | ಕಾರ್ತಿಕ ಪೂರ್ಣಿಮೆಯ ಬಿಕ್ರಮ 1526 ರಂದು (ಎ.ಡಿ. 1469) |
| 2) | ಜನ್ಮ ಸ್ಥಾನ | : | ಶ್ರೀ ನಾನಾಕಣ ಸಾಹೇಬ (ರಾಯಭೋಮಿ, ತಲವಂಡಿ, ಪಾಕಿಸ್ತಾನ) |
| 3) | ತಂದೆ ತಾಯಿ | : | ಶ್ರೀ ಮೆಹತಾ ಕಾಲಜಿ ಮತ್ತು ಮಾತಾ ತ್ರಿಪತಾಜಿ |
| 4) | ವಿವಾಹ | : | ಬಖೋಕೆಯ ರಂಧಾವೆಯ ಮೂಲಚಂದ್ರಜೀ ಅವರ ಮಗಳು ಬಿಬೀ ಸುಲಖಣಿಜೀಯೊಡನೆ ಬಿಕ್ರಮ 1545 ದಂದು |
| 5) | ಸಂತಾನ | : | ಬಾಬಾ ಶ್ರೀ ಚಂದಜಿ ಮತ್ತು ಬಾಬಾಲಖಿಮಿ ಚಂದಜೀ |

6) ಯಾತ್ರೆ : ಪ್ರಥಮ ಯಾತ್ರೆ ಪೂರ್ವ ದಿಕ್ಕಿಗೆ (1554)
ದ್ವಿತೀಯ ಯಾತ್ರೆ ದಕ್ಷಿಣ ದಕ್ಕಿಗೆ (1567)
ತೃತೀಯ ಯಾತ್ರೆ ಉತ್ತರ ದಿಕ್ಕಿಗೆ (1571)
ಚತುರ್ಥ ಯಾತ್ರೆ ಪಶ್ಚಿಮ ದಿಕ್ಕಿಗೆ (1575)

7) ಸ್ವರ್ಗಸ್ಥರಾದದ್ದು : ಗುರುದಾಸಪೂರ ಜಿಲ್ಲೆಯ ಕರತಾರಪೂರದಲ್ಲಿ (ರಾವಿ) 1596)

ಶ್ರೀ ಗುರುನಾನಕ ತಮ್ಮ ಎರಡನೆಯ ಪಾದಯಾತ್ರೆ ಮಾಡುತ್ತ ಬೀದರ ಜಿಲ್ಲೆಗೆ ಆಗಮಿಸಿದ್ದರು. ಇಂದಿಗೆ ಐದು ನೂರು ವರ್ಷಗಳ ಹಿಂದೆ ಶ್ರೀ ಗುರುನಾನಕ ದೇವ ಅವರು ಪ್ರಪಂಚದ ನಾಲ್ಕು ದಿಕ್ಕಿಗೆ ಜೀವಿಗಳ ಉದ್ಧಾರಕ್ಕಾಗಿ ಪಾದಯಾತ್ರೆಯನ್ನು ಕೈಗೊಂಡರು. ಮೊದಲನೆ ಯಾತ್ರೆಯನ್ನು ಪೂರ್ವ ದಕ್ಕಿಗೆ ಕ್ರಿ.ಶ. 1510 ರಿಂದ 1514 ರ ವರೆಗೆ ಕೈಗೊಂಡಿದ್ದರು. ಸುಲ್ತಾನಪೂರ ಲೋದಿಂದ ಹೊರಟು ಊರಿಂದ ಊರಿಗೆ ಸಂಚರಿಸುತ್ತ ಜೀವಿಗಳ ಉದ್ಧಾರ ಮಾಡುತ್ತ ನಡೆದರು. ಓಂ ಕಾರೇಶ್ವರದಿಂದ ಬುರಾಂಪುರ ಮಾರ್ಗವಾಗಿ ನಾಂದೇಡಗೆ (ಶ್ರೀ ಜೂರ ಸಾಹೇಬ ಬಂದು ತಲುಪಿದರು) ಅಲ್ಲಿ ಅವರು ಆಸನ ಹಾಕಿದರು. ಇಂದಿಗೂ ಆ ಸ್ಥಳದಲ್ಲಿ ಗುರುದ್ವಾರ ಮೂಲ ಟೆಕರಿ ಇದೆ.

ಆ ಕಾಲದಲ್ಲಿ ಬಂದಿಗಿವಾಲಾ ಲಾಕಡಶಹಫಕೀರನು ಇರುತ್ತಿದ್ದನು. ಜಗತ್ತ ಗುರು ಬಾಬಾ ಜೀ ಅವರು ಆತನಿಗೆ ಅನೇಕ ವರಗಳನ್ನಿಟ್ಟು ಪುನೀತರನ್ನಾಗಿ ಮಾಡಿದರು. ಆ ನಂತರ ಗೋಲಕೂಂಡ ಹೈದ್ರಬಾದ ಮಾರ್ಗವಾಗಿ ಬೀದರ ನಗರಕ್ಕೆ ಬಂದು ತಲುಪಿದರು. ಆ ಸಮಯದಲ್ಲಿ ಬೀದರ ಒಂದು ಚಿಕ್ಕ ಹಳ್ಳಿಯಾಗತ್ತು. ಅಲ್ಲಿಂದ ಒಂದು ಮೈಲ ದೂರದಲ್ಲಿ ಗುಡ್ಡದ ಕೆಳಗೆ ಡೆರೆ (ಶಿಬಿರ) ಹಾಕಿಕೊಂಡು ಇದ್ದರು. ಅದೆ ಸ್ಥಳದಲ್ಲಿ ಇಂದು ಅಮೃತ ಕುಂಡ ಇದೆ.

ಗಿರಿ-ಕಂದರಗಳಿಂದ ಕೂಡಿದ ಸುಂದರವಾದ ದೃಶ್ಯವನ್ನು ಕಂಡು ಶ್ರೀ ಗುರುನಾನಕರು "ಭಾಯಿಮರ ಧಾನೆಗೆ" "ರ ಬಾಬ" ಬಾರಿಸಲು ಹೇಳುತ್ತಾರೆ. ಆಗ ಭಾಯಿ ಮರ್ದಾನೆಯವರ ಸಂಗೀತಕ್ಕೆ ನಾನಕರು ಹಾಡುತ್ತಿದ್ದಾಗ ಮುಸ್ಲಿಂ ಫಕೀರ ಜಲಾಲುದ್ದೀನ ಮತ್ತು ಯಾಕುಬ ಅಲಿ ಕೊಂಡು ತನೆಲ್ಲ ಜನರನ್ನು ಸಂಗೀತ ಕೇಳಲು ಹೇಳುತ್ತಾನೆ. ಜೋತೆಗೆ ತನ್ನ ಸಂಗಡಿಗರನ್ನು ಉದ್ದೇಶಿಸಿ... ಬಂಧುಗಳೆ ನಾವೇಷ್ಟು ಭಾಗ್ಯವಂತರಾಗಿದ್ದೇವೆ ಎಂದರೆ ಸ್ವತಃ ಖೂದಾವಂದ ಕರಿಂ ಗುರುನಾನಕರ ಅವತಾರದಲ್ಲಿ ಬಂದು ನಮ್ಮನ್ನು ಉಪದೇಶಿಸುತ್ತಿದ್ದಾರೆ. ಅವರ ದರ್ಶನಕ್ಕಾಗಿ ದೇವರು ಕೂಡ ಇಚ್ಛಿಸುತ್ತಾರೆ. ಅಂತಹವರು ನಮ್ಮ ಹತ್ತಿರ ಬಂದಿದ್ದಾರೆ. ನಡೆಯಿರಿ ನಾವೆಲ್ಲರೂ ಅಲ್ಲಿ ಹೋಗಿ ನಮ್ಮ ಹೃದಯವನ್ನು ಶಾಂತಗೊಳಿಸೋಣ ಎಂದು ಹೇಳಿದ್ದಾಗ ಎಲ್ಲ ಸಂಗಡಿಗರು ಪೀರ ಜಲಾಲುದ್ದಿನನ ಮಾರ್ಗದರ್ಶನದಲ್ಲಿ ಗುರುನಾನಕ ದೇವರ ದರ್ಶನ ಪಡೆಯಲು ಹೋದರು. ದರ್ಶನ ಪಡೆದು ಎಲ್ಲರು ಸಂತೋಷಗೊಂಡಿದರು. ಆಗ ಗುರುಜಿಯವರು ಅವರನ್ನು ಉಪದೇಶಿಸುತ್ತಾ ಹಿತವಾಣಿಗಳನ್ನು ಹೇಳಿದರು.

ಆಗ ಫಕೀರ ಫೀರ ಜಲಾಲುದ್ದೀನ್ ಹೀಗೆ ಹೇಳುತ್ತಾರೆ. ..... ಹೇ ಧರ್ಮಾತ್ಮನೆ ನೀವು ಉಪದೇಶ ಮಾಡಿ ನಮ್ಮೇಲ್ಲರ ಆತ್ಮವನ್ನು ಶಾಂತಗೋಳಿಸಿದಿರಿ, ತಮ್ಮ ದರ್ಶನದಿಂದ ನಮಗೆ ಅಲ್ಲಾ ತಾಲಾರ ದರ್ಶನವಾದಂತಾಯಿತು. ಬಹಳದಿನಗಳಿಂದ ನಾವು ಕೇಳುತ್ತಿರ್ದ್ದೇವೆ ನೀವು ದಕ್ಷಿಣ ದಡೆಗೆ ಯಾತ್ರೆ ಕೈಗೊಂಡು ಪಾಪಾತ್ಮರನ್ನು ಉದ್ಧರಿಸುತ್ತಿದ್ದಿರಿ. ಇಂದು ತಮ್ಮ ದರ್ಶನ ಪಡೆದು ನಾವು ಪಾವನರಾದೇವು ಎಂದು ಹೇಳಿದರು.

ಬೀದರ ಸುತ್ತ ಮುತ್ತಲಿನ ಅನೇಕ ಜನರು ಅನೇಕ ಕಡೆಯಿಂದ ಬಂದು ಶ್ರೀ ಗುರು ನಾನಕರ ದರ್ಶನ ಪಡೆದು ಅಲ್ಲಿ ಭಗವತ ಕಿರ್ತನೆಯನ್ನು ಆರಂಭಿಸಿದರು. ಇಡೀ ಪ್ರದೇಶವು ಭಜನೆ ಕಿರ್ತನೆಗಳ ಧ್ವನಿಯಿಂದ ತುಂಬಿ ತುಳಕತೊಡಗಿತ್ತು. ಸುತ್ತಮುತ್ತಲಿನ ದೂರ ದೂರ ಪ್ರದೇಶಗಳಿಂದ ಎಲ್ಲಾ ಸಾಧು, ಸಂತರು, ಭಕ್ತಾದಿಗಳು ದರ್ಶನಕ್ಕಾಗಿ ಬರತೊಡಗಿದರು. ಈ ಭೊಭಾಗದ ಭಾಗ್ಯ ಉದಯಿಸಿತೆಂದು ಕೊಂಡಾಡಿದರು.

ಬೀದರನಲ್ಲಿ ಎಲ್ಲಿ ನೋಡಿದರೂ ಉಪ್ಪು ನೀರು ಕಾಣಿಸುತ್ತಿದ್ದವು. ಹಾಗೂ 100, 150 ಅಡಿ ಆಗೆದರು. ಕೂಡ ನೀರು ದೊರೆಯುತ್ತಿರಲಿಲ್ಲ. ಇದ್ದರಿಂದ ಇಲ್ಲಿಗೆ ಯಾರು ಒಬ್ಬರು ಹೆಣ್ಣು ಕೊಡಲು ಮುಂದೆಬರುತ್ತಿರಲಿಲ್ಲ. ಅಲ್ಲದೆ ಜನರು ಮತ್ತು ದನಕರುಗಳು ಮತ್ತು ಪಕ್ಷಿಗಳು ಸಿಹಿ ನೀರಿಗಾಗಿ ಹಪ ಹಪಿಸುವಂತಾಗಿತ್ತು. ಹೀಗಾಗಿ ಬೀದರದ ಎಲ್ಲ ಸಂತರು, ಫಕೀರರು ಮತ್ತು ಭಕ್ತಾದಿಗಳು ಸೇರಿ ಶ್ರೀ ಗುರುನಾನಕ ದೇವರನ್ನು ........ ನೀವು ಎಲ್ಲ ಕಡೆಗೂ ಯಾತ್ರೆ ಕೈಗೊಂಡು ಜನರ ಉದ್ಧಾರ ಮಾಡಿದ್ದಿರಿ. ಅದಕ್ಕೆ ಇಲ್ಲಿ ಒಂದು ಝಿರಾ ತೆಗೆದು ಉಪ್ಪು ನೀರಿನ ಸ್ಥಳದಲ್ಲಿ ಸಿಹಿ ನೀರು ಬರುವಂತೆ ಮಾಡಬೇಕು ಎಂದು ವಿನಂತಿಸಿಕೊಂಡರು.

ಆಗ ಅಲ್ಲಿ ನೆರದ ಸಾದು ಸಂತರನನ್ನೋದೇಶಿ ಉಪದೇಶಿಸುತ್ತಾ ಬಾಬಾಜಿಯವರು ಸಂತರಾದ ಜಲಾಲುದ್ದಿನ ಹಾಗೂ ಸಂತ ಯಾಕುಬ ಅಲಿಯವರ ಪ್ರಾರ್ಥನೆಯನ್ನು ಮನ್ನಿಸಲಾಗಿದೆ ಎಂದು ಬಾಬನವರು ಸಂತ ಕರತಾರ ಅವರಿಗೆ ಸೂಚಿಸುತ್ತಾ ತಮ್ಮ ಚರಣ ಕಮಲ ಹೆಬ್ಬೆರಳಿನಿಂದ ಗುಡ್ಡದಿಂದ ಒಂದು ಕಲ್ಲು ಬಂಡೆಯನ್ನು ಸರಿಸಿದರು. ಆಗ ಕಲ್ಲು ಬಂಡೆ ಸರಿಸಿದ ಕೂಡಲೆ ಅಲ್ಲಿ ಸಿಹಿ ನೀರಿನ ತಿಳಿ ನೀರಿನ ಕಾರಂಜಿಯೊಂದು ಚೀಮ್ಮಿ ಬಂದ್ದಿತ್ತು. ಇಂತಹ ಆಶ್ಚರ್ಯ ದೃಶ್ಯವನ್ನು ನೋಡಿದ ಅಲ್ಲಿ ನೆರೆದಿದ್ದ ಸಾದು-ಸಂತರ, ಭಕ್ತಾದಿಗಳು ಸಂತೋಷದಿಂದ ಧನ್ಯ ಗುರು ನಾನಕ ! ಧನ್ಯ ಗುರು ನಾನಕ !! ಎಂದು ಒಮ್ಮತದಿಂದ ಉದ್ಧರಿಸಿದರು. ಹಾಗೂ ಶ್ರೀ ಗುರುನಾನಕ ಚರಣಗಳ ಮೇಲೆ ಬಿದ್ದು ದಿರ್ಘದಾಡ ನಮ್ಮಸ್ಕರ ಮಾಡಿದರು. (ಈ ಘಟನೆ ಮಾರ್ಚ ಅಥವಾ ಏಪ್ರಿಲ್ ಕ್ರಿ.ವ. 1512ರಲ್ಲಿ ಜರುಗಿತ್ತು.

ಅಂದಿನಿಂದ ಇಂದಿನವರೆಗೆ ನಾನಕ ಝರಾದಲ್ಲಿ ಕಾರಂಜಿಯು ನಿರಂತರವಾಗಿ ಚಿಮ್ಮುತ್ತಲೆ ಇದೆ. ಎಲ್ಲಿಯವರೆಗೆ ಈ ಜಗತ್ತು ಇರುತ್ತದೆಯೊ ಅಲ್ಲಿಯ ವರೆಗೆ ಈ ಝರನಾ ಹರಿಯುತ್ತಿರುತ್ತದೆ ಎಂದು ನಾನಕರು

ಹೇಳಿದರು. ಆದ್ದರಿಂದ ಬೀದರ ಜಿಲ್ಲಾ ನಾನಕ ಝುರಾ ಇದರಲ್ಲಿ ಯಾವಾಗಲು ನೀರು ಇರುತ್ತವೆ. ಇಲ್ಲಿ ನೀರು ಎಂದೂ ಬತ್ತಿ ಹೊಗಿಲ್ಲ ಗುರು ನಾನಕ ಹೆಸರಿನಲ್ಲಿ ಪ್ರಸಿದ್ಧವಾಗಿದೆ.

ಗುರು ನಾನಕದ್ವಾರ ಅತ್ಯಂತ ಸುಂದರ ಭವ್ಯವಾಗಿದೆ. ಗುರುದ್ವಾರದಲ್ಲಿ ಪ್ರವೇಶಿಸುವಾಗ ಎಲ್ಲ ಜನಾಂಗದ ಜನರು ತಲೆಯ ಮೇಲೆ ಬಟ್ಟೆ ಹಾಕೊಳ್ಳಲೆಬೇಕು ಇದು ಇಲ್ಲಿನ ನಿಯಮವಾಗಿದೆ. ತಲೆಯ ಮೇಲೆ ಯಾವುದೆ ಬಟ್ಟೆ ಇಲ್ಲದವರನ್ನು ಯಾರಿಗೂ ಒಳಗಡೆ ಬಿಡುವುದಿಲ್ಲ. ಹಾಗೂ ದ್ವಾರದ ಹತ್ತಿರದಲ್ಲೆ ನೀರಿನ ವ್ಯವಸ್ಥೆ ಇದೆ. ಎಲ್ಲ ಜನರು ಈ ನೀರಿನಲ್ಲಿ ಕಾಲಿಟ್ಟು ಮುಂದಕ್ಕೆ ಗುರುದ್ವಾರದಲ್ಲಿ ಪ್ರವೇಶಿಸಬೇಕಾಗುತ್ತದೆ. ಗುರುದ್ವಾರದಲ್ಲಿ ಯಾವಾಗಲು ಪ್ರಾರ್ಥನೆ ಮಾಡುತ್ತಲೆ ಇರುತ್ತಾರೆ. ಹಾಗೂ ಖಡ್ಗ ಇತರ ವಸ್ತುಗಳಿಗೆ ಹೆಚ್ಚಿನ ವಿಶೇಷ ಪೂಜೆ ಸಲ್ಲಿಸುತ್ತಾರೆ. ಇಲ್ಲಿ ಅಂದರೆ ಗುರುದ್ವಾರದಲ್ಲಿ ಸದಾ ಯಾವಾಗಲು ಹಾಡುತ್ತ ಭಾರಿಸುತ್ತ ಇರುತ್ತಾರೆ. ಬಂದ ಜನರಿಗೆ ದಿನಾಲು ದೇವರ ಪ್ರಸಾದ ಕೊಡುತ್ತಾರೆ. ಜೋಗ ಸಿಂಗ ಉದ್ಯಾನವನ ಅತ್ಯಂತ ಸುಂದರವಾಗಿದೆ ಮತ್ತು **"ಅಮೃತ ಕುಂಡ"** ಇದೆ ಇದರಲ್ಲಿ ನೀರು ಸದಾ ಇರತ್ತುವೆ. ಇದು ಗುರುನಾನಕ ಅವರು ತಮ್ಮ ಪಾದ ದಿಂದ ಬಂಡೆಯನ್ನು ಸರಿಸಿದ್ದಾಗ ಅಲ್ಲಿಂದ ಸಿಹಿ ನೀರಿನ ಕಾರಂಜಿ ಚಿಮ್ಮಿತ್ತು ಅದೆ ಈ ಅಮೃತ ಕುಂಡ ಆಗಿದೆ. ಇಲ್ಲಿ ಅನೇಕ ಜನರು ಬಂದು ಈ ಅಮೃತ ಕುಂಡ ನೀರಿನಲ್ಲಿ ನಾಣ್ಯಗಳನ್ನು ಹಾಕುತ್ತಾರೆ. ಹಾಗೂ ತಮ್ಮ ಮನಸ್ಸಿನಲ್ಲಿ ಇದ್ದದ್ದನ್ನು ಬೇಡಿಕೊಳ್ಳುತ್ತಾರೆ. ಹೀಗೆ ನಾಣ್ಯಹಾಕಿ ಬೇಡಿಕೊಂಡರೆ ತಮ್ಮ ಕಾರ್ಯಪೂರ್ಣಗೋಳ್ಳುತ್ತವೆ ಎಂದು ಜನರ ನಂಬಿಕೆಯಾಗಿದೆ. ಇಂದು ಕೂಡ ಇದು ನೊಡಬಹುದು. ಈ ಗುರುದ್ವಾರದ ಹತ್ತಿರದಲ್ಲಿ ಗುರುನಾನಕರ ಇತಿಹಾಸದ ಮ್ಯುಜಿಯಂ ಇದೆ. ಇದರಲ್ಲಿ ಗುರುನಾಕರ ಜೀವನದ ಚಿತ್ರಗಳಿವೆ. ಇಲ್ಲಿಗೆ ಬಂದ ಜನರಿಗೆ ಎಲ್ಲ ರೀತಿಯ ವ್ಯವಸ್ಥೆ ಕೂಡ ಇದೆ.

ಈ ತಾಣ ಸಿಖ್ಖ ಜನರ ಪವಿತ್ರ ಕ್ಷೇತ್ರ ಸ್ಥಳವಾಗಿದೆ. ದೇಶ-ವಿದೇಶಗಳಿಂದ ಅನೇಕ ಯಾತ್ರಿಕರು ಇಲ್ಲಿಗೆ ಬಂದು ಈ ಝುರಾದಲ್ಲಿಯ ಸಿಹಿ ನೀರನ್ನು ಬಾಟಲ್‌ಗಳಲ್ಲಿ ತುಂಬಿಕೊಂಡು ಹೋಗುತ್ತಾರೆ. ಈ ನೀರನ್ನು ಕುಡಿದರೆ ಯಾವ ಕಾಯಿಲೆಯೂ ಬರುವುದಿಲ್ಲವೆಂಬ ನಂಬಿಕೆಯೂ ಇದೆ.

## ಗುರುದ್ವಾರ ಮಾತಾ ಭಾಗೋಜಿ

ಬೀದರ ಜಿಲ್ಲೆಯ ಜನವಾಡ ಗ್ರಾಮದಲ್ಲಿ ರುಸ್ತಮರಾವ ಮತ್ತು ಬಾಲಾರಾವ ಎಂಬುವರು ತಮ್ಮ ಗಡಿ (ಮನೆ) ಯಲ್ಲಿ ಇರುತ್ತಿದ್ದರು. ಅಂದಿನ ಆಳ್ವಿಕೆಯಲ್ಲಿ ವಿನಾಕಾರಣ ಇವರನ್ನು ಸತಾರ ಕಿಲಾದಲ್ಲಿ ಬಂಧಿಸಿ ಇಟ್ಟರು. ಇವರಿಬ್ಬರೂ ಬಂಧನದಿಂದ ಮುಕ್ತರಾಗಲು ದಿನಾಲು ಪ್ರಾರ್ಥನೆ ಮಾಡುತ್ತಿದ್ದರು. ಇವರ ಪ್ರಾರ್ಥನೆಯನ್ನು ಕೇಳಿ ಶ್ರೀ ಗುರುಗೋವಿಂದ ಸಿಂಗಜಿ ಅವರು ಪ್ರಕಟವಾದರು (ಇವರು ಸಿಖ್ಖ ಧರ್ಮದ 10ನೆ ಗುರು) ಇವರನ್ನು ಬಂಧನದಿಂದ ಮುಕ್ತಗೊಳಿಸಿದರು. ಅವರನ್ನು ಆಜ್ಞೆ ಮಾಡುತ್ತ ಹೀಗೆ

ಹೇಳಿದರು ನಾನು ಸ್ವರ್ಗಸ್ಥನಾಗಿ ಬಹಳ ದಿನವಾಗಿದ್ದು ನಾಂದೇಡಿನ ಜನರು ಬಹಳ ದುಃಖದಲ್ಲಿದ್ದಾರೆ. ಆದ ಕಾರಣ ನೀವು ಇಲ್ಲಿಂದ ಹೋಗಿ ಯಾರು ನನ್ನನ್ನು ಪೂಜ್ಯ ಭಾವದಿಂದ ಪ್ರಾರ್ಥಿಸುವರೊ ಅವರನ್ನು ನಾನು ದರ್ಶನ ನೀಡುತ್ತೇನೆ. ನಾನು ಅವರ ಹತ್ತಿರ ಇದ್ದು ರಕ್ಷಿಸುತ್ತಿರುತ್ತೇನೆ ಎಂದು ಹೇಳಿ ಮತ್ತು ಸಾತಾರಾ ಕಿಲಾದಲ್ಲಿ ನಡೆದ ಘಟನೆ ಹೇಳಿ ಅವರನ್ನು ಸಮಾಧಾನಿಸು ಎಂದು ಹೇಳಿದರು.

ಆಗ ರುಸ್ತುಮರಾವ ಮತ್ತು ಬಾಲಾರಾವರು ನಾಂದೇಡ ತಲುಪಿ ಶ್ರೀ ಗುರು ಗೋವಿಂದ ಸಿಂಗಜಿ ಅವರ ವಾಣಿಯನ್ನು ಹೇಳಿದರು. ಅಲ್ಲದೆ ಕೆಲವು ದಿನಗಳವರೆಗೆ ಅವರಿಬ್ಬರೂ ಅಲ್ಲಿಯೇ ಉಳಿದುಕೊಂಡರು. ನಂತರ ಅವರಿಬ್ಬರೂ ತಮ್ಮ ಸ್ವಂತ ಊರಾದ ಜನವಾಡಕ್ಕೆ ಹೋಗಲು ನಿರ್ಧರಿಸಿದ್ದಾಗ ಎಲ್ಲ ಜನರು ಸೇರಿ ಅವರನ್ನು ಕಳುಹಿಸಲು ಬಂದು ಸಭೆ ಸೇರಿದರು. ಅಲ್ಲಿ ಇಬ್ಬರೂ ಸಹೋದರರೂ ತಮ್ಮನ್ನು ಕಳುಸಿಸಲು ಯಾರಾದರೂ ಬರಬೇಕೆಂದು ವಿನಂತಿಸಿಕೊಂಡಾಗ ಯಾರು ಮುಂದೆ ಬರಲಿಲ್ಲ. ಇಂತಹ ಸಮಯದಲ್ಲಿ ಜೈರನೈಲ್ ಮಾತಾ ಭಾಗೋಜಿ ಧೈರ್ಯದಿಂದ ಅಸ್ತ್ರ-ಶಸ್ತ್ರಗಳನ್ನು ತೆಗೆದುಕೊಂಡು ನಾನು ಹೋಗುತ್ತೇನೆ ಎಂದು ಎದ್ದು ನಿಂತರು. ನಂತರ ಮೂವರು ಬಂದರು.

ಮುಂದೊಂದು ದಿನ ಮಾತಾ ಭಾಗೋಜಿ ಮರಳಿ ನಾಂದೇಡಕ್ಕೆ ಹೊಗಲು ಸಿದ್ಧರಾದಾಗ ಜನವಾಡದ ಜನರು ಶ್ರೀ ಗುರು ನಾನಕ ದೇವರ ಬೀದರ ಯಾತ್ರೆಯ ವಿಷಯ ಕೂಡ ತಿಳಿಸಿಕೊಟ್ಟರು. ಇದನ್ನು ಕೇಳಿದ ಮಾತಾ ಭಾಗೋಜಿ ಜನವಾಡದಲ್ಲಿಯೇ ಉಳಿದುಕೊಂಡರು. ದಿನಾಲು ಬೀದರ ಝಿರಾಕ್ಕೆ ಹೋಗಿ ಪವಿತ್ರ ನೀರಿನ ಸ್ನಾನ ಮಾಡಿ ಅಲ್ಲಿಯ ಭಕ್ತಾದಿಗಳಿಗೆ ಪಾಠೋಪಚಾರ ಮಾಡಿ ಮರಳಿ ಜನವಾಡಕ್ಕೆ ಹೋಗುತ್ತಿದ್ದರು. ಮುಂದೆ ಒಂದು ದಿನ ಮುಪ್ಪಾವಸ್ಥೆಯಲ್ಲಿ ತಾನು ಸ್ವರ್ಗವಾಸನಾದರೆ ತನ್ನ ಆಸ್ತಿಗಳನ್ನು ನಾಂದೇಡಕ್ಕೆ ತಲುಪಿಸಬೇಕು ಎಂದು ಹೇಳಿದರು. ರುಸ್ತುಮರಾವ ಮತ್ತು ಬಾಲಾರಾವ ಹಾಗೆ ಮಾಡಿದರು. ಹೀಗೆ ಮಾತಾ ಭಾಗೋಜಿಯವರ ನೆನಪಿಗಾಗಿ ಇಂದಿಗೂ ಜನವಾಡದಲ್ಲಿ ಭವ್ಯ ಮಂದಿರ ನೋಡಲು ಸಿಗುತ್ತದೆ.

## ಭಾಯಿ ಸಾಹೇಬ ಸಿಂಗ್

ಭಾರತದೆಲ್ಲೆಡೆಗೂ ಶೋಷಣೆ ದಬ್ಬಾಳಿಕೆ, ಮೋಸ, ವಂಚನೆಯಿಂದ ಬಡ-ಜನರು ತತ್ತರಿಸಿ ಹೊಗಿದ್ದರು. ಇದನ್ನು ನಾಶಗೊಳಿಸಲು ಸಿಖ್ ಧರ್ಮದ ಹತ್ತನೆಯ ಗುರು ಶ್ರೀ ಗುರು ಗೋವಿಂದ ಸಿಂಗಜಿ ಕ್ರಿ.ಶ. 1699 ರಲ್ಲಿ ಶ್ರೀ ಅನಂತಪೂರ ಸಾಹೇಬದಲ್ಲಿ ಒಂದು ಸಭೆಯನ್ನು ಕರೆದರು. ಭಾರತದ ಮೂಲೆ-ಮೂಲೆಯಿಂದ ಸುಮಾರು 80 ಸಾವಿರ ಜನರು ಈ ಸಭೆಯಲ್ಲಿ ಭಾಗವಹಿಸಿದ್ದರೂ. ಶ್ರೀ ಗುರು ಗೋವಿಂದ ಸಿಂಗಜಿ ಅವರು ವೇದಿಕೆಯ ಮೇಲೆ ಹೋಗಿ ಮೌನದಿಂದ ತಲವಾರವನ್ನು ತೆಗೆದು ! ನನಗೆ ಒಂದು ತಲೆ ಬೇಕಾಗಿದೆ !! ಎಂದು ಹೇಳಿದರು. ಕೇಳಿದ ಜನರೆಲ್ಲಾ ದಿಗ್ಭ್ರಮೆಗೊಂಡರು. ಅವರಲ್ಲಿ ಒಬ್ಬ

ಲಾಹೋರಿನ ದಯಾರಾಮ ಎಂಬವನು ತನ್ನ ಎರಡು ಕೈಜೋಡಿಸಿ ನನ್ನ ತಲೆ ತಮ್ಮ ಮುಂದೆ ಇದೆ ಮಹಾರಾಜರೆ ಎಂದು ಉತ್ತರಿಸಿದನು. ಆಗ ಮಹಾರಾಜರು ಡೆರೆಯೊಳಗೆ ಕರೆದುಕೊಂಡು ಹೋಗಿ ತಲೆಯನ್ನು ಕತ್ತರಿಸಿದರು. ಹೊರಗೆ ಬಂದು ಇನ್ನೊಂದು ತಲೆ ಬೇಕಾಗಿದೆ ಎಂದರು ಆಗ "ದಿಲ್ಲಿ ನಿವಾಸಿ ಭಾಯಿ ಧರಮಚಂದ ಜಿ" ಅವರು ನನ್ನದೂ ತಲೆ ಹಾಜರಿದೆ ಎಂದು ಹೇಳಿದರು. ಅವರಿಗೆ ಒಳಗೆ ಕರೆದುಕೊಂಡು ಹೋಗಿ ತಲೆಯನ್ನು ಕತ್ತರಿಸಿ ಹೊರಗೆ ಬಂದು ಇನ್ನೊಂದು ತಲೆ ಬೇಕು ಎಂದು ಕೇಳಿದರು. ಆಗ "ಜಗನ್ನಾಥಪೂರಿ ನಿವಾಸಿ ಭಾಯಿ ಹಿಮ್ಮತಚಂದ ಜಿ"ಕೈ ಜೋಡಿಸಿ ನಾನು ತಲೆ ದಂಡ ನೀಡುವೆ ಎಂದು ಹೇಳಿದರು. ಆಗ ಶ್ರೀ ಗುರು ಗೋವಿಂದ ಸಿಂಗರೂ ಆವರನ್ನು ಒಳಗೆ ಕರೆದುಕೊಂಡು ಹೋಗಿ ತಲೆ ಕತ್ತರಿಸಿ ಹೊರಗೆ ಬಂದು ಇನ್ನೊಂದು ತಲೆ ಬೇಕು ಎಂದರು. ಆಗ "ದ್ವಾರಕಾ ನಿವಾಸಿ ಭಾಯಿ ಮೊಹಕಮ ಚಂದಜಿ" ತಯಾರಾದಾಗ ಅವರನ್ನು ಒಳಗೆ ಕರೆದುಕೊಂಡು ಹೊಗಿ ತಲೆ ಕತ್ತರಿಸಿ ಹೋರಗೆ ಬಂದು ಇನ್ನೊಂದು ತಲೆ ಬೇಕು ಎಂದರು. ಆಗ "ಭಾಯಿ ಸಾಹೇಬ ಚಂದ ಬೀದರ ನಿವಾಸಿ" ಕೈ ಜೋಡಿಸಿ ಎದ್ದು ನಿಂತರು. ನಾನು ತಲೆ ಕೊಡುತ್ತೇನೆ ಎಂದರು. ಆಗ ಅವರನ್ನು ಒಳಗೆ ಕರೆದುಕೊಂಡು ಹೋಗಿ ತಲೆ ಕತ್ತರಿಸಿದರು. ಹೀಗೆ ಐದು ಜನರನ್ನು ಸ್ನಾನ ಮಾಡಿಸಿ ಬಿಳಿ ಬಟ್ಟೆಯನ್ನು ಹೊತ್ತಿಸಿ ಬಂದು ಪಂಚ ಲೋಹದ ಪಾತ್ರೆಯಲ್ಲಿ ಪಂಚವಾಣಿಯನ್ನು ಪಠಿಸುತ್ತಾ ಅಮೃತವನ್ನು ತಯಾರಿಸಿದರು. ಅದನ್ನು ಆ ಐದು ಮೃತ ದೇಹಗಳ ಮೇಲೆ ವ್ಹಾಯ ಗುರುಜಿ ಕಾ ಖಾಲಸಾ ! ವ್ಹಾಯ ಗುರುಜಿ ಕೀ ಫತ್ತೇಹ !! ಎಂದು ಹೇಳಿ ಸಿಂಪಡಿಸಿದರು. ತಕ್ಷಣವೇ ಅವರು ಜೀವಂತವಾಗಿ ಎದ್ದು ನಿಂತರು. ಆಗ ಅವರಿಗೆ ಇಂದಿನಿಂದ ನೀವು ! ಸಿಂಗ ! ಎಂದು ವರ ನೀಡಿ ಅಮೃತ ಕುಡಿಸಿದರು. ''ಸವ್ವಾ ಲಾಖಸೆ ಏಕ ಲಡಂವಾ ತಬೈ ಗೋವಿಂದ ಸಿಂಗ ನಾಮ ಕಹಲಾವಾ'' ಎಂದು ಉಪದೇಶಿಸಿದರು.

ಭಾಯಿ ಸಾಹೇಬ ಚಂದಜಿ ಅವರು ಬೀದರ ನವರಾಗಿದ್ದು ಗುರುನಾರಾಯಣರ ಮನೆಯಲ್ಲಿ ಶ್ರೀಮತಿ ಷನುಕಮ್ಮ ಅವರ ಹೊಟ್ಟೆಯಲ್ಲಿ 1675 ರಂದು ಜನಿಸಿದರು. 11ನೆ ವಯಸ್ಸಿನಲ್ಲೆ ತಂದೆ ತಾಯಿಗಳೊಡನೆ ಅನಂತಪೂರಕ್ಕೆ ಬಂದಿದ್ದರು. ಚಮಕಾರ ಸಾಹೇಬ ಯುದ್ಧದಲ್ಲಿ ಶಹಿದರಾದರು.

ಮಾತಾ ಭಾಗೋಜಿ ಅವರ ನೇನಪಿಗಾಗಿ ಬೀದರ ಜಿಲ್ಲೆಯ ಗ್ರಾಮವಾದ ಜನವಾಡದಲ್ಲಿ ಭದ್ರವಾದ ಮಂದಿರ ಕಟ್ಟಿದ್ದಾರೆ. ಇಂದು ಕೂಡ ಅಲ್ಲಿ ವಿಶೇಷ ಪೂಜೆ ಮಾಡುತ್ತಾರೆ ಮಾತಾ ಭಾಗೋಜಿ ಅವರ ಅಂತಿಮ ಅನುಷ್ಠಾನವು ಬೀದರಿಗೆ 10 ಕಿ.ಮಿ. ದೂರವಾಗಿದ್ದ ಜನವಾಡ ಗ್ರಾಮದಲ್ಲಿ ಪ್ರಸಿದ್ಧವಾಗಿದೆ. ಅಲ್ಲಿ ಗುರುದ್ವಾರ ಸಾಹೇಬ ವತಿಯಿಂದ ಸೇವಾ ಸಂಗತಿ ನಡೆಯುತ್ತದೆ. ಈ ಎಲ್ಲಾ ವ್ಯವಸ್ಥೆಯನ್ನು ಶ್ರೀ ನಾನಕ ಝೀರಾ ಸಾಹೇಬ ಬೀದರನ ಪ್ರಬಂಧ ಸಮೀತಿಯವರೆ ನೋಡಿ ಕೊಳುತ್ತಾರೆ.

ಈ ಸ್ಥಾನದ ಮಹಾನ ಸೇವೆಯನ್ನು ಪಂಥ ಭೂಷಣ ಸಂತ ಭಿಷನಸಿಂಗ ಅವರು ಮತ್ತು ಶ್ರೀ ಮಾನಸಂತ ಬಾಬಾ ಕರತಾರ ಸಿಂಗ ಅವರು ತಮ್ಮ ಕೊನೆಗಳಿಗೆ ವರೆಗೂ ಸಲ್ಲಿಸಿದರು.

# ಪಾಪನಾಶಿನಿ

ಬೀದರ ಜಿಲ್ಲೆಯ ಅತ್ಯಂತ ಪ್ರಾಚೀನ ಮಂದಿರವಾದ ಪಾಪನಾಶಿನಿ ಅತ್ಯಂತ ಸುಂದರವಾಗಿದೆ. ಪಾಪನಾಶಿನಿ ಮಂದಿರದಲ್ಲಿ ಶಿವಲಿಂಗವಿದೆ. ಇದು ರಾಮನಿಂದ ಸ್ಥಾಪಿಸಲ್ಪಟ್ಟಿದೆ. ಈ ಸ್ಥಾಪನೆ ಕುರಿತ ಒಂದು ಐತಿಹ್ಯ ಕಥೆ ಇದೆ.

ರಾಮನು ವನವಾಸದಲ್ಲಿದ್ದಾಗ ಈ ಬೀದರ ಜಿಲ್ಲೆಯ ಸ್ಥಳದಲ್ಲೆಲ್ಲ ಸುತ್ತಾಡಿದ. ಪಾಪನಾಶಿನಿ ಸ್ಥಳ ಮೊದಲು ಅತ್ಯಂತ ಘಟದಿಂದ ಕುಡಿದ ಸ್ಥಳವಾಗಿತ್ತು. ಮಂದಿರದ ಹಿಂದಗಡೆ ಈಗಲೂ ಘಟ್ಟ ಇದೆ. ಘಟ್ಟದಲ್ಲಿ ತಿರುಗಾಡುತ್ತ ರಾಮ ಲಕ್ಷ್ಮಣ ಒಂದು ಸ್ಥಳದಲ್ಲಿ ಕೂತು ಚಂಡು ಆಡಲು ಬಯಸಿದರು. ರಾಮನ ಕೈಯಲ್ಲಿ ಒಂದು ಚಿಕ್ಕದಾದ ಲಿಂಗ ಇದ್ದಿತ್ತು. ಅದನ್ನು ಕೇಳಗೆ ಇಟ್ಟು ರಾಮ ಲಕ್ಷ್ಮಣ ಆಟ ಆಡಿದರು. ನಂತರ ಇಲ್ಲಿಂದ ಬೇರೆ ಕಡೆ ಹೋಗಬೇಕಾದಾಗ ಆ ಚಿಕ್ಕದಾದ ಲಿಂಗವನ್ನು ಅದೆ ಸ್ಥಳದಲ್ಲಿಟ್ಟು ತಾನು ಇಲ್ಲಿಗೆ ಈ ಸ್ಥಳಕ್ಕೆ ಬಂದ ನೇನಪಿಗಾಗಿ ಈ ಲಿಂಗ ಇಲ್ಲೆ ಪ್ರತಿಷ್ಠಾಪಿಸಿದ್ದೆನೆ. ಈ ಸ್ಥಳಕ್ಕೆ ಬಂದ ಜನರಿಗೆ ಪಾಪನಷ್ಟವಾಗಿ ಸಕಲ ಕಷ್ಟಗಳು ದೂರವಾಗಲಿ ಎಂದು ಹೇಳಿ ಲಿಂಗ ಸ್ಥಾಪಿಸಿ ನಂತರ ಇಲ್ಲಿಂದ ಬೇರೆ ಕಡೆ ಅವರು ಹೋದರು.

ನಂತರ ಒಂದು ದಿವಸ ಒಬ್ಬ ವಯಸ್ಸಾದ ಹೆಣ್ಣುಮಗಳಿಗೆ ಆ ಲಿಂಗ ಕಣ್ಣಿಗೆ ಬಿದ್ದಿತ್ತು. ಆಗ ಅವಳು ಅಲ್ಲಿಗೆ ಹೋಗಿ ಆ ಲಿಂಗವನ್ನು ನೋಡಿದಳು... ಹೀಗೆ ಸ್ವಲ್ಪ ದಿವಸದವರೆಗೆ ನೋಡುತ್ತಲೆ ಇದ್ದಳು. ಆ ಚಿಕ್ಕದಾದ ಲಿಂಗವು ದಿನದಿನಕ್ಕೆ ಬೆಳೆಯಲಾರಂಭಿಸಿತ್ತು. ಈ ಚಿಕ್ಕದಾದ ಲಿಂಗ ದಿನ'ದಿನಕ್ಕೆ ಬೆಳೆಯುವುದನ್ನು ಕಂಡು ಆ ವಯಸ್ಸಾದ ಹೆಣ್ಣು ಮಗಳಿಗೆ ಆಶ್ಚರ್ಯವಾಗಿತ್ತು. ಹೀಗೆ ಒಂದು ದಿನ ಆ ವಯಸ್ಸಾದ ಹೆಣ್ಣುಮಗಳು ಈ ಲಿಂಗ ಹೀಗೆ ದಿನಾಲು ಎಷ್ಟು ಬೆಳೆಯುತ್ತದೆ ನೋಡೋಣ ಎಂದು ಒಂದು ದಾರವನ್ನು ತೆಗೆದುಕೊಂಡು ಆ ಲಿಂಗವನ್ನು ಹಿಡಿದು ಅಳೆದಳು. ಆಗ ಅವಳು ಹೀಗೆ ಹಿಡಿದ ನಂತರ ಆ ಲಿಂಗ ಅಂದಿನಿಂದ ಬೆಳೆಯುವುದು ನಿಂತುಹೋಗಿ ಬಿಟ್ಟಿತ್ತು.

ಆ ಹೆಣ್ಣು ಮಗಳು ಆ ಧಾರವನ್ನು ಲಿಂಗಕ್ಕೆ ಅಳತೆ ಮಾಡಿ ಹಿಡಿತ್ತಾ ಇಲ್ಲವೆಂದರೆ ಆ ಲಿಂಗ ಇನ್ನೂ ಏಷ್ಟೋ ದೊಡ್ಡದಾಗಿ ಬೆಳೆಯುತ್ತಿತ್ತು ಎಂದು ಗೋತ್ತಿಲ್ಲ. ನಂತರ ಆ ಹೆಣ್ಣು ಮಗಳು ಪಶ್ಚತಾಪ ಪಟ್ಟು ಮರಣ ಹೊಂದಿದ್ದಳು. ಆ ಲಿಂಗ ಇನ್ನೂ ಕೂಡ ಅಷ್ಟೆ ಆಕಾರ ರೂಪದಲ್ಲಿದೆ.

ಹೀಗೆ ಎಷ್ಟೋ ಕಾಲ ಗತಿಸಿದ ನಂತರ ಆ ಸ್ಥಳ ಘಟವಾದ ಕಾರಣ ಆ ಕಡೆ ಯಾರು ಹೋಗುತ್ತಾ ಇರಲಿಲ್ಲ. ಹೀಗೆ ಒಂದು ದಿವಸ ಏರಫೋರ್ಸ ವ್ಯಕ್ತಿ ಕಣ್ಣಿಗೆ ಈ ಲಿಂಗ ಕಾಣಿಸಿತ್ತು ಏರಫೋರ್ಸ ವ್ಯಕ್ತಿ ಲಿಂಗವನ್ನು ಕಂಡು ಆಶ್ಚರ್ಯಪಟ್ಟು, ನಂತರ ಈ ಲಿಂಗವನ್ನು ಬೇರೆ ಒಳ್ಳೆಯ ಸ್ಥಳದಲ್ಲಿಟ್ಟು ಸ್ಥಾಪಿಸಬೇಕು ಎಂದು ಯೋಚಿಸಿ ನಂತರ ತಿರ್ಮಾನಿಸಿದ.

ನಂತರ ಆ ಲಿಂಗವನ್ನು ಕಿತ್ತಲು ಪ್ರಾರಂಭಿಸಿದ ಅನೇಕ ವ್ಯಕ್ತಿಗಳಿಂದ ಕೆತ್ತುವ ಕೆಲಸ ಪ್ರಾರಂಭಿಸಿದ ಆ ಲಿಂಗ ಕೆತ್ತಲಿಲ್ಲ. ನಂತರ ನೆಲದ ಆಳಕ್ಕೆ ಅಗಿಯಲು ಹಚ್ಚಿದ ನೆಲ ಆಗಿಯುತ್ತಾ ಹೋದಂತೆ ಲಿಂಗವೂ ಕಾಣಿಸುತ್ತಲೆ ಇರುತ್ತಿತ್ತು. ಇದನ್ನು ಕಂಡು ಆಶ್ಚರ್ಯ ಪಟ್ಟು ನಂತರ ಈ ಲಿಂಗವನ್ನು ಹೇಗಾದರೂ ಮಾಡಿ ಈ ಸ್ಥಳದಿಂದ ತೆಗೆದು ಬೇರೆ ಸ್ಥಳದಲ್ಲೆ ಸ್ಥಾಪಿಸಬೇಕೆಂದು ಯೋಚಿಸಿದರು. ನಂತರ ಎಷ್ಟೊಂದು ಪ್ರಯತ್ನ ಪಟ್ಟರು ಆ ಲಿಂಗ ಬರಲಿಲ್ಲ.

ನಂತರ ಇನ್ನೂ ಸ್ವಲ್ಪ ಆಳಕ್ಕೆ ಅಗಿಯಲು ಪ್ರಾರಂಭಿಸಿದರು. ಆಗ ಆ ಲಿಂಗದ ಕೆಳಗಡೆ ನೀರು ಕಾಣಿಸಿದವು. ಇದನ್ನು ಕಂಡು ಜನರು ಆಶ್ಚರ್ಯ ಪಟ್ಟರು. ನೀರಿನ ಮೇಲೆ ಇಷ್ಟು ಲಿಂಗ ಇದೆ ಎಂದು ಆಶ್ಚರ್ಯ ಪಟ್ಟು ನಂತರ ಆ ಲಿಂಗವನ್ನು ಮೊದಲು ಹೇಗೆ ಇತ್ತೋ ಹಾಗೆ ಇರಲೆಂದು ಪುನಃ ನಂತರ ಮೊದಲಿನಂತೆ ಮುಚ್ಚಿ ಬಿಟ್ಟರು. ಲಿಂಗಕ್ಕೆ ಜನರು ಪೂಜೆ ಮಾಡಿದರು. ಆ ಲಿಂಗದ ಕೆಳಗಿನ ನೀರು ಇಂದು ಕೂಡ ಹರಿಯುತ್ತವೆ.

ಇಲ್ಲಿಗೆ ಬಂದ ಜನರು ಭಕ್ತರು ಆ ನೀರಿನಿಂದಲೆ ಸ್ನಾನ ಮಾಡುತ್ತಾರೆ. ಆ ನೀರಿನಲ್ಲಿ ಸ್ನಾನ ಮಾಡಿದ ಜನರಿಗೆ ಭಕ್ತರಿಗೆ ಅವರು ಮಾಡಿದಂತಹ ಪಾಪಗಳು ನಾಶವಾಗುತ್ತವೆ ಎಂದು ಜನರ ನಂಬಿಕೆ, ಹೇಳಿಕೆ ಯಾಗಿದೆ. ಅದರಿಂದ ಇಲ್ಲಿಗೆ ಅನೇಕ ಕಡೆಯಿಂದ ಜನರು ಬಂದು ಸ್ನಾನ ಮಾಡಿ ಲಿಂಗ ಪೂಜೆ ಮಾಡುತ್ತಾರೆ.

ಪಾಪನಾಶಿನಿ ಎಂದರೆ ಇಲ್ಲಿಗೆ ಬಂದ ಜನರ ಪಾಪಗಳು ಸಕಲ ಕಷ್ಟ ತೋಂದರೆ ರೋಗಗಳು ನಾಶವಾಗುತ್ತವೆ. ಜನರು ಮಾಡಿದಂತಹ ಸಕಲ ಕೆಟ್ಟ ಕಾರ್ಯಗಳು ಇಲ್ಲಿಗೆ ಬಂದ ಜನರ ವ್ಯಕ್ತಿಯ ಪಾಪನಾಶವಾಗುತ್ತವೆ. ಅದರಿಂದ ಪಾಪನಾಶಿನಿ ಎಂದು ಕರೆಯುತ್ತಾರೆ.

ಆ ಲಿಂಗವನ್ನು ಕಂಡಿದ ಏರಫೋರ್ಸ ವ್ಯಕ್ತಿಯು ಆ ಲಿಂಗ ಇದ್ದ ಸ್ಥಳವನ್ನು ಮಂದಿರ ಕಟ್ಟಿಸಿದ. ಆತನ ಹೆಸರು ''ಬಲರಾಮ'' ಎಂದು ಕರೆಯಲಾಗಿದೆ.

ಲಿಂಗವು ಅತ್ಯಂತ ಸುಂದರವಾಗಿದೆ. ಐದು ಹೆಡಿಯ ಕಂಚಿನ ನಾಗಣ್ಣಸ್ವಾಮಿಯ ಲಿಂಗದ ಮೇಲೆ ಹೆಡೆಯೇತ್ತಿದ್ದು ಇದೆ. ಮಂದಿರ ಚಿಕ್ಕದಾಗಿದ್ದರು ಬಹಳ ಸುಂದರವಾಗಿದೆ. ಮಂದಿರದ ಒಳಗಡೆ ಸುಂದರವಾದ ಕಮಾನಗಳಿಂದ ಕಟ್ಟಲಾಗಿದೆ. ಶಿವಲಿಂಗಕ್ಕೆ ಜನರು ರುದ್ರಾಭಿಷೇಕ ಮಾಡಿಸುತ್ತಾರೆ. ಇಲ್ಲಿ ಪೂಜಾರಿಗಳು ಸದಾ ಇರುತ್ತಾರೆ. ಬಂದ ಭಕ್ತ ಅವರ ಪೂಜೆ ? ಮಾಡುತ್ತಾರೆ. ಲಿಂಗವನ್ನು ತೋಳೆದ ನೀರನ್ನು ಹೋರಗಡೆ ಹೋಗಲು ಒಳಗಿನಿಂದ ಹೊರಗಡೆಯ ವರೆಗೆ ವ್ಯವಸ್ಥೆ ಮಾಡಲಾಗಿದೆ. ಇಲ್ಲಿಗೆ ಯಾವಾಗಲು ಜನರು ಬರುತ್ತಾರೆ. ಎಲ್ಲಾ ಜಾತಿ-ಜನಾಂಗದ ಜನರು ಬಂದು ಪೂಜೆ ಸಲ್ಲಿಸುತ್ತಾರೆ.

ಶಿವಲಿಂಗದ ಸ್ವಲ್ಪ ಹೊರಗಡೆ ಮತ್ತೆ ಕಲ್ಲಿನ ಮೂರು ಲಿಂಗಗಳು ಸ್ಥಾಪಿಸಿದ್ದಾರೆ. ಹಾಗೂ ಆ ಲಿಂಗಗಳ ಹತ್ತಿರದಲ್ಲೆ ಎಡಗಡೆ ಬಲಗಡೆ ಆಂಜನಯ್ಯ ಮತ್ತೊಂದು ಕಡೆ ಗಣೇಶನ ಕಲ್ಲಿನ ಮೂರ್ತಿಗಳಿವೆ.

ಇವು ನವಗ್ರಹಗಳಾಗಿವೆ. ಯಾಕೆ ಹೀಗೆ ಸ್ಥಾಪಿಸಿದ್ದಾರೆ ಎಂದರೆ ? ದೇವರನ್ನು ನವಗ್ರಹಗಳನ್ನು ಸುತ್ತಬಾರದೆಂದು ಈ ವ್ಯವಸ್ಥೆ ಮಾಡಲಾಗಿದೆ ಎಂದು ಹೆಳಲಾಗಿದೆ.

ಈ ಪಾಪನಾಶ ಮಂದಿರದಲ್ಲಿ ಶಿವರಾತ್ರಿ ದಿವಸ ಜಾತ್ರೆಯಾಗುತ್ತದೆ. ಅನೇಕ ಕಡೆಯಿಂದ ಭಕ್ತರು ಜನರು ಇಲ್ಲಿಗೆ ಬರುತ್ತಾರೆ. ರಾತ್ರಿ ಭಜನೆ, ಕಿರ್ತನೆ ಇರತ್ತುದೆ. ಮುಂಜಾನೆ ಜಾತ್ರೆಯಾಗುತ್ತದೆ. ಎಲ್ಲ ಜನಾಂಗದ ಜನರು ಬಂದು ಇಲ್ಲಿ ಜಾತ್ರೆ ಮಾಡುತ್ತಾರೆ. ಹಾಗೂ ಶ್ರಾವಣ ಮಾಸದಲ್ಲಿ ಒಂದು ತಿಂಗಳ ತನಕ ಜಾತ್ರೆ ಇರುತ್ತದೆ. ಹಾಗೂ ಏಕಾದಸಿ ದಿವಸ ಪಂಡಲ ಪುರದಿಂದ ಜನರು ಭಕ್ತರು ಪಾದಯಾತ್ರೆ ಮಾಡಿಕೊಂಡು ಬೀದರ ಜಿಲ್ಲೆಗೆ ಬರುತ್ತಾರೆ. ಮೊದಲು ಈ ಜನರು ಕೋಟೆಯ ಅಂದರೆ ಬೀದರ ನಗರದ ಕೋಟೆಯ ಹತ್ತಿರ ಬರುತ್ತಾರೆ. ಏಕೆಂದರೆ ಕೊಟೆಯ ಹತ್ತಿರ ದ್ವಾರದಲ್ಲಿ ಪಾಂಡುರಂಗನ ಪಾದದ ಸ್ಥಾಪನೆ ಇದೆ. ಆದರಿಂದ ಮೊದಲು ಈ ಸ್ಥಳಕ್ಕೆ ಬಂದು ಇಲ್ಲಿ ಪೂಜೆ ಮಾಡಿ ಭಜನೆ ಮಾಡಿ ಈ ಕೋಟೆಯಲ್ಲಿ ಅಂದು ಇವರಿಗೆ ಹಾಗೂ ಬಂದ ಜನರಿಗೆ ಭಕ್ತರಿಗೆ ಊಟದ ವ್ಯವಸ್ಯೆ ಕೂಡ ಇರುತ್ತದೆ. ಇವರು ಪೂಜೆ, ಊಟ ಆದ ನಂತರ ಪಾಪನಾಶಿನಿಗೆ ಹೋಗುತ್ತಾರೆ. ಇವರು ಹೊದ ನಂತರ ಅಲ್ಲಿ ಪೂಜೆ ನಡೆಯುತ್ತದೆ. ಇದು ಪರಂಪರೆಯಿಂದ ನಡೆದು ಬಂದಿದೆ.

ಬೀದರ ಜಿಲ್ಲೆಯ ಎಲ್ಲ ಧರ್ಮದ ಬೀಡಾಗಿದೆ. ಇಲ್ಲಿ ರಾಮ, ಪಾಂಡುರಂಗ ಬಂದಂತಹ ಸ್ಥಳವಾಗಿದೆ. ಇದು ಅತ್ಯಂತ ಹೇಮ್ಮೆಯ ಭೂಮಿಯಾಗಿದೆ. ಮಹಾನ ವ್ಯಕ್ತಿಗಳು ಇಲ್ಲಿ ಬಂದು ಹೋಗಿದ್ದಾರೆ. ಅವರು ಬಂದು ಹೋಗಿದ್ದ ನೇನಪಿಗಾಗಿ ಲಿಂಗ ಹಾಗೂ ಅವರ ಪಾದದ ಸ್ಥಾಪನೆಗಳು ಮಾಡಿದ್ದಾರೆ. ಇಂದು ಕೂಡ ಪಾಂಡುರಂಗನ ಪಾದದ ಗುರುತ ಇದೆ. ಅಲ್ಲಿ ಇಂದು ಕೂಡ ಪೂಜೆ ಮಾಡುತ್ತಾರೆ. ಬೀದರ ಕೋಟೆಯ ದ್ವಾರದ ನಡುವೆ ಒಂದು ಪಾದದ ಗುರುತಿನ ಆಕಾರದ ಕಲ್ಲಿದೆ. ಒಂದೆ ಇದೆ. ಇದು ಇಲ್ಲಿಗೆ ಬಂದ ಗುರುತಾಗಿದೆ. ಇನ್ನೊಂದು ಪಾದದ ಗುರುತು ಬೀದರನ ಶಹಾಗಂಜ ದರವಾಜದಲ್ಲಿ. ಇದು ಹೋಗುವಾಗಿನ ಗುರುತ್ತಾಗಿದೆ. ಇಂದು ಕೂಡ ಜನರು ಈ ಪಾದಗಳಿಗೆ ಪೂಜೆ ಮಾಡುತ್ತಾರೆ. ಪಾಪನಾಶಿನಿ ಮಂದಿರದಲ್ಲಿಮದುವೆ ಕೂಡ ಆಗುತ್ತವೆ. ಮದುವೆಯ ಅನುಕುಲದ ವ್ಯವಸ್ಥೆಕೂಡ ಮಾಡಲಾಗಿದೆ. ನೀರಿನ ವ್ಯವಸ್ಥೆ ಕೂಡ ಇದೆ. ಪಾಪನಾಶಿನಿ ಮಂದಿರದ ಹಿಂದಗಡೆ ಇಂದು ಕೂಡ ಘಟ ಇದೆ. ಮಂದಿರ ತಗ್ಗಿನಲ್ಲಿ ಇದೆ. ಪಾಪನಾಶಿನಿಗೆ ಹೊಗುವ ದಾರಿ ಕಲ್ಲಿನಲ್ಲಿ ಕಡೆದು ದೊಡ್ಡದಾದ ದಾರಿ ಮಾಡಿದ್ದಾರೆ. ಮಂದಿರ ತನಕ ಅನೇಕ ಛೀಡಿಗಳಿವೆ. ಪಾಪನಾಶಿನಿ ಸ್ಥಳ ನೋಡಲು ಅತ್ಯಂತ ಸುಂದರವಾಗಿದೆ.

ಪುರಾಣ ಪ್ರಸಿದ್ಧವಾದ ಈ ಪುಣ್ಯ ಕ್ಷೇತ್ರಕ್ಕೆ ರಾಮೇಶ್ವರ ಎಂತಲೂ ಕರೆಯುತ್ತಾರೆ. ಹಿಂದೆ ಶುಕ್ರಾಚಾರ್ಯರು ಇದನ್ನು ಪೂಜಿಸುತ್ತಿದ್ದರೆಂದು ಪ್ರತೀತಿಗಳಿವೆ. 108 ಜೋರ್ತಿಲಿಂಗಗಳಲ್ಲಿ ಈ ಪಾಪನಾಶಿನಿ ಶಿವಲಿಂಗ ಒಂದಾಗಿದೆ.

# ಮೇಥೊಡಿಸ್ಟ್ ಚರ್ಚ್

ಬೀದರ ಜಿಲ್ಲೆಯ ಮೆಥೋಡಿಸ್ಟ್ ಚರ್ಚ್ ಅತ್ಯಂತ ಸುಂದರ ಹಾಗೂ ಭವ್ಯವಾಗಿದೆ. ಇದನ್ನು ಕಟ್ಟಿಸಿದಾತ ತಾತಸಿಮನ್ ಹೆಸರಾಗಿದೆ. ಇದು ಮಿಶನರಿಗಳ ಕಾಲದಲಾಗಿದೆ. ಈ ಚರ್ಚ ನೋಡಲು ಅತ್ಯಂತ ಸುಂದರವಾಗಿದೆ. ಈ ಚರ್ಚಿನ ಒಳಗಡೆ ಜನರು ಕೂಡಲು ಅನೇಕ ಬೆಂಚಗಳಿವೆ. ಮುಂದಗಡೆ ಒಂದು ವೇದಿಕೆ ಇದೆ. ಅದರಲ್ಲಿ ನಡುವೆ ಯಸು ಕ್ರಿಸ್ತನ ವೇದಿಕೆ ಇದೆ. ಅದರ ಮೇಲೆ ಬೈಬಲ ಇಟ್ಟಿದ್ದಾರೆ. ಇದರ ಎಡಗಡೆ ಬಲಗಡೆ ಬಂದ ಅತಿಥಿ ಪಾದರಿ ಕುಡುವ ಸ್ಥಳವಿದೆ. ಬೈಬಲ್ ಓದುವ ವೇದಿಕೆ ಇನ್ನೊಂದ ಕಡೆ ಇದೆ. ಎಡಗಡೆ ಬಲಗಡೆ ಹಾಗೂ ಎದುರುಗಡೆ ದ್ವಾರಗಳಿವೆ. ಹಾಗೂ ಕೆಳಗಡೆ ಸ್ಥಳ ಸಾಲುವದಿಲ್ಲವೆಂದು ಸೆಕೆಂಡ ಬ್ರ್ಯಾಂಚ ಮೇಲಗಡೆ ಕೂಡಲು ಸಹ ಸುಂದರವಾದ ಸ್ಥಳವಿದೆ. ಒಳಗಡೆ ಅತ್ಯಂತ ಪ್ರಶಾಂತ ಸ್ಥಳವಾಗಿದೆ.

ಚರ್ಚಿನ ಹೊರ ಆವರಣದಲ್ಲಿ ಸುಂದರವಾದ ಹೂ ಗಿಡ ಮರಗಳ ಉದ್ಯಾನ ವಿದೆ. ನೋಡಲು ಅತ್ಯಂತ ಸುಂದರಾವಗಿದೆ. ಈ ಚರ್ಚಿನಲ್ಲಿ ಪ್ರತಿ ರವಿವಾರ ಯೇಸು ಕ್ರಿಸ್ತನ ಪ್ರವಚನ ನಡೆಯುತ್ತದೆ. ಅನೇಕ ಕಡೆಯಿಂದ ಜನರು ಈ ಚರ್ಚಿನಲ್ಲಿ ಬಂದು ಪ್ರಾರ್ಥನೆ ಸಲ್ಲಿಸಿ ಯೇಸು ಕ್ರಿಸ್ತನ ವಚನ ಕೇಳುತ್ತಾರೆ.ಈ ಚರ್ಚಿನಲ್ಲಿ ಮದುವೆ ಕೂಡ ಆಗುತ್ತವೆ. ಈ ಮೇಥೊಡಿಸ್ಟ್ ಚರ್ಚಿನ ಹತ್ತಿರದಲ್ಲೆ ಎನ್.ಎಫ್.ಹೆಚ್.ಎಸ್. ಎನ್ನುವ ಹೈಸ್ಕೂಲ ಕಾಲೇಜ ಇದೆ. ಈ ಹೈಸ್ಕೂಲ ನಲ್ಲಿ ಮಕ್ಕಳಿಗೆ ಮೊದಲು ಯೇಸು ಕ್ರಿಸ್ತನ ಪ್ರಾರ್ಥನೆ ಮಾಡಿಸಿ, ಯೇಸು ಕ್ರಿಸ್ತನ ವಚನ ಹೇಳಿ ನಂತರ ದಿನ ನಿತ್ಯದಂತೆ ಪಾಠ ಪ್ರಾರಂಭಿಸುತ್ತಾರೆ. ಪ್ರತಿದಿನ ಮೊದಲು ಪ್ರಾರ್ಥನೆ ಪ್ರಾರಂಭಿಸುತ್ತಾರೆ. ಪ್ರತಿದಿನ ಮೊದಲು ಪ್ರಾರ್ಥನೆ ಸಲ್ಲಿಸಿ, ನಂತರ ತರಗತಿ ಕೋಣೆಯಲ್ಲಿ ಹೋಗುತ್ತಾರೆ.

ಈ ಎನ್.ಎಫ್.ಹೆಚ್.ಎಸ್. ಹೈಸ್ಕೂಲ್ ಹಿಂದಗಡೆ ಯೇಸು ಕ್ರಿಸ್ತನ ಗವಿ ಇದೆ. ಇದು ಪ್ರಾಚೀನವಾಗಿದೆ. ಈ ಗವಿಯನ್ನು ಕಲ್ಲಿನ ಬಂಡೆಯಲ್ಲಿ ಕೊರೆಯಲಾಗಿದೆ. ಈ ಗವಿಯಲ್ಲಿ ಒಳಗಡೆ ಯೇಸು ಕ್ರಿಸ್ತನ ಚಿತ್ರಗಳಿವೆ. ಅನೇಕ ಬೈಬಲ್‌ಗಳಿವೆ. ಇಲ್ಲಿಗೆ ಅನೇಕ ಜನರು ಬರುತ್ತಾರೆ. ಗವಿಯಲ್ಲಿ ಬಂದು ಮೇಣದ ಬತ್ತಿ ಹಚ್ಚಿ ಬೈಬಲ್ ಓದಿ ಪ್ರಾರ್ಥನೆ ಮಾಡುತ್ತಾರೆ.

ಮೇಥೊಡಿಸ್ಟ್ ಚರ್ಚಿನಲ್ಲಿ ಬೇಸಿಗೆಯಲ್ಲಿ ಜಾತ್ರೆ ಕೂಡ ಆಗತ್ತುದೆ. ಈ ಜಾತ್ರೆಯಲ್ಲಿ ಅನೇಕ ಜನರು ಅನೇಕ ಕಡೆಯಿಂದ ಬರುತ್ತಾರೆ. ಅತ್ಯಂತ ಹರುಷದಿಂದ ಈ ಜಾತ್ರೆ ಆಚರಿಸುತ್ತಾರೆ. ಡಿಸೆಂಬರ 25 ರಂದು ಪವಿತ್ರವಾದ ಕ್ರಿಸಮಸ್ ಹಬ್ಬವನ್ನು ಕ್ರೈಸ್ತ ಬಾಂಧವರು ಸಂಭ್ರಮದೊಂದಿಗೆ ನಗರದ ಮಂಗಲಪೇಟನಲ್ಲಿರುವ ಮೇಥೊಡಿಸ್ಟ್ ಚರ್ಚಿನಲ್ಲಿ ಆಚರಿಸುತ್ತಾರೆ. ಈ ಚರ್ಚಿನಲ್ಲಿ ಅಂದು ಸಾವಿರಾರು ಕ್ರೈಸ್ತ ಬಾಂಧವರು ಭಾಗವಹಿಸುತ್ತಾರೆ. ಮೇಣಬತ್ತಿ ಪ್ರಜ್ವಲಿಸಿ ಸಾಮೂಹಿಕ ಪ್ರಾರ್ಥನೆ ಸಲ್ಲಿಸುತ್ತಾರೆ. ನಂತರ

ಕ್ರಿಸ್ತನ ಸಂದೇಶ ಹೇಳುತ್ತಾರೆ. ಮುಖ್ಯ ಕಾರ್ಯಕ್ರಮಗಳು ಜರುಗುತ್ತವೆ. ಹಲವು ಫಾದರ್ಸ್, ಪಾಸ್ಟರ್ಸ್ ಇರುತ್ತಾರೆ. ಎಲ್ಲರೂ ಕೂಡಿ ಹಬ್ಬವನ್ನು ಅತ್ಯಂತ ಉತ್ಸಾಹ ಹರುಷದಿಂದ ಇಲ್ಲಿ ಆಚರಿಸುತ್ತಾರೆ. ಹಾಗೂ ಗುಡ್ ಫ್ರಾಯಿಡೇ ದಿವಸ ಕೂಡ ಅತ್ಯಂತ ಹರುಷದಿಂದ ಆಚರಿಸುತ್ತಾರೆ. ಕ್ರೈಸ್ತನ ಹೆಸರಿನ ಮೇಲೆ 40 ದಿವಸ ಉಪವಾಸ ಮಾಡುತ್ತಾರೆ. ಒಂದೆ ಸಮಯ ದಿವಸದಲ್ಲಿ ಊಟ ಮಾಡುತ್ತಾರೆ.

ಯೇಸು ಕ್ರೈಸ್ತ ಸತ್ತು ಮೂರು ದಿವಸದ ನಂತರ ಮತ್ತೇ ಜಿವಂತನಾಗಿ ಏಳುತ್ತಾನೆ. ಆ ಎದ್ದ ದಿವಸ ಈ ಗುಡ್ ಪ್ರಾಯಿಡೇ ಹಬ್ಬ ಆಚರಿಸುತ್ತಾರೆ. 40 ದಿವಸದಲ್ಲಿ ಕ್ರೈಸ್ತನ ಪ್ರಾರ್ಥನೆ ಮಾಡುತ್ತಾರೆ. ಭಜನ ಹಾಕುತ್ತಾರೆ. ಕ್ರೈಸ್ತನ ವಚನಗಳ ಸಂದೇಶ ಮಾಡುತ್ತಾರೆ. ಈ ಚರ್ಚಿನಲ್ಲಿ ಜಾತ್ರೆ, ಕ್ರೀಸ್‌ಮಸ್ ಹಬ್ಬ ಹಾಗೂ ಗುಡ್‌ಪ್ರಾಯಿಡೇ ಅತ್ಯಂತ ಸಂಭ್ರಮದಿಂದ ಆಚರಣೆ ಮಾಡುತ್ತಾರೆ.

# ಬೌದ್ಧ ವಿಹಾರ

ಕ್ರಿ.ಪೂ. 3ನೇ ಶತಮಾನದಲ್ಲಿ ಮೌರ್ಯರ ಆಳ್ವಿಕೆಗೆ ಒಳಗಾದ ಈ ಬೀದರ ಜಿಲ್ಲೆಯಲ್ಲಿ ಆಗ ಬೌದ್ಧಮತ ಪ್ರಚಲಿತದಲ್ಲಿತ್ತು. ಕ್ರಿ.ಶ. 1470 ಸುಮಾರಿಗೆ ಬೀದರಕ್ಕೆ ಆಗಮಿಸಿದ ರಷ್ಯದ ಪ್ರವಾಸಿ ನಿಕಿಟನ ಎಂಬುವನು ಬೀದರದಲ್ಲಿ ಜೈನರ ಮತ್ತು ಬೌದ್ಧರ ಮನೆಗಳಿಗೆ ಭೇಟಿಯಿತ್ತು. ಅವರೋಡನೆ ಮಾತನಾಡಿದ್ದನ್ನು ಬರೆದಿದ್ದಾನೆ. ಬೀದರ ಜಿಲ್ಲೆಯಲ್ಲಿ ಮನ್ನಎಖೆಳ್ಳಿ ಮೌಂಟ ಬೌದ್ಧ ವಿಹಾರ ಮತ್ತು ವಾಲದೊಡ್ಡಿ ಗ್ರಾಮ ಬೌದ್ಧ ವಿಹಾರಗಳು ನೋಡಲು ಅತ್ಯಂತ ಸುಂದರ ಭವ್ಯವಾಗಿದೆ.

## ಬುದ್ಧನ ಜೀವನ

"ಏಷ್ಯದ ಬೆಳಕು" ಎಂದು ಖ್ಯಾತನಾದ ಗೌತಮ ಬುದ್ಧನು ಕ್ರಿ.ಪೂ. 567 ರಲ್ಲಿ ಜನಿಸಿದ ತಂದೆ ಶುದ್ಧೋದನ ಅರಸನಾಗಿದ್ದ ತಾಯಿ ಮಾಯದೇವಿ ಆಗಿದ್ದಳು. ಮಾಯಾದೇವಿ ವಿಹಾರದ ಸಮಯದಲ್ಲಿ ತಿರುಗಾಡುತ್ತ ಲುಂಬಿಣೀವನದಲ್ಲಿ ಒಂದು ಅಶೋಕ ವೃಕ್ಷದ ಕೆಳಗೆ ಪೂರ್ಣ ಚಂದ್ರನಂತೆ ತೇಜಸ್ವಿಯಾದ ಗಂಡುಶಿಶುವಿಗೆ ವೈಶಾಖ ಶುದ್ಧ ಪೂರ್ಣಿಮೆಯ ದಿನ ಜನ್ಮವಿತ್ತಳು. ಆ ಮಗುವನ್ನು ಕಾಣಲು ಜ್ಞಾನಿಗಳು ಮುನಿಗಳು ಪಂಡಿತರು ರಾಜರು ಜನರು ಬಂದು ನೋಡಿ ಸಂತೋಷ ಪಡುತ್ತಿದ್ದರು. ಅಸಿತ ಮಹರ್ಷಿ ಮಗವನ್ನುಕಂಡು ಅತ್ತರು ಏಕೆಂದರೆ ಈ ಮಗು ದೊಡ್ಡದಾಗುವಷ್ಟರಲ್ಲಿನಾನು ಇರುವುದಿಲ್ಲವೆಂದು ಮಗುವಿಗೆ ಗೌತಮ ಸಿದ್ಧಾರ್ಥನೆಂದು ನಾಮಕರಣ ಮಾಡಿದರು.

ಹಾಗೂ ಈ ಮಗುವನ್ನು ಕಂಡು ಜೋತಿಷ್ಯರು ಅವನಲ್ಲಿ ಅಪೂರ್ವವಾದ ಮಹಾ ವ್ಯಕ್ತಿಯ ಲಕ್ಷಣಗಳಿರುವುದನ್ನು ಕಂಡು ಮಹಾಪುರುಷನಾಗುವ 32 ಚಿನ್ಹೆಗಳಿದ್ದವು. ಈತನು ವೃದ್ಧನನ್ನು ರೋಗಿಯನ್ನು ಸನ್ಯಾಸಿಯನ್ನು ಮತ್ತು ಮೃತ್ಯ ದೇಹವನ್ನು ನೋಡಿ ಅದರಿಂದ ಪರಿಣಾಮವೇನಾದರೂ ಆದರೆ ಮಾಹವೀರಾಗಿ ಯಾಗುವನೆಂದು ಹೇಳಿದರು.

ತಂದೆ ಶೊದ್ಧೋದನನ್ನು ಮಗುವನ್ನು ವಂಶೋದ್ಧಾರಕ ನಾಗಲೆಂದು ವೈರಾಗ್ಯದತ್ತ ಮನಸ್ಸು ಹೋಗದಿರಲೆಂದು ಆಶಿಸಿ ಭೋಗವಿಲಾಸಗಳ ಪಂಜರದಲ್ಲಿಡಲು ಯತ್ನಿಸಿದನು. ಕಾಲಮಾನಕ ಅನುಗುಣವಾಗಿ ಚಳಿಗಾಲ, ಮಳೆಗಾಲ, ಬೇಸಿಗೆ ಹೀಗೆ ಮೂರು ಅರಮನೆಗಳು ಸಿದ್ಧಮಾಡಿದನು. ಮಗನಿಗೆ ಬೇಕಾದ ಎಲ್ಲ ವಸ್ತು ವೈಭವ ಅರಮನೆಯಲ್ಲಿ ಇಟ್ಟಿದ ತಾಯಿ ಮಾಯದೇವಿ ಚಿಕ್ಕ ವಯಸ್ಸಿನಲ್ಲೆ ತೀರಿ ಕೊಂಡಿದ್ದಳು, ಗೌತಮಿ ನೋಡಿಕೊಳ್ಳುತ್ತಿದ್ದಳು.

ಶೋಧೂದನ ಯೆಶೋಧರೆಯ ಜೊತೆ ಮಗನ ಮದುವೆ ಮಾಡಿಸಿದ ಶೋಧೂದನನ್ನ ಆಶೆ ವಂಶೋಧಾರ ಆಗಿತ್ತು. ಸಿದ್ಧಾರ್ಥನಿಗೆ ಒಂದು ಗಂಡು ಮಗು ಆಯಿತ್ತು. ಅದರ ಹೆಸರು ರಾಹುಲ ಎಂದು

ನಾಮಕರಣ ಮಾಡಿದ. ಸಿದ್ದಾರ್ಥ ಒಂದು ದಿನ ವಿಹಾರಕ್ಕಾಗಿ ಅರಮನೆಯಿಂದ ಹೊರಗೆ ಬಂದನು. ಆಗ ಒಬ್ಬ ವಯಸ್ಸಾದ ಮುದಕ್ಕ ಒಂದು ಶವ ಒಬ್ಬ ನರಳುವ ರೋಗಿ. ಹಾಗೂ ಒಬ್ಬ ಭೀಕ್ಷುಕನನ್ನು ಕಂಡನು ಹಾಗೂ ತನ್ನ ಸೇವಕನಿಗೆ ಇದೇಲ್ಲ ಕೇಳಿ ವಿಷಯ ತಿಳಿದುಕೊಂಡನು. ಇದೆಲ್ಲ ಕೇಳಿ ದು:ಖಿತನಾದನು ಅದರ ಪರಿಹಾರ ಕಾಣಲು ಯೋಚಿಸಿದ ಇವುಗಳನೆಲ್ಲ ಕಂಡು ಮಾನವ ಜೀವನದ ಬಗ್ಗೆ ರೋಸಿ ಹೋದ ಮಾನವತೆಯ ನಿತ್ಯ ದು:ಖ ಪರಿಹಾರವನ್ನು ಹುಡಕಲು ಯೋಚಿಸಿದ.

ತಂದೆ ಶೋದ್ದೋಧನ ಮಗ ಸಿದ್ದಾರ್ಥನಿಗೆ ಎಷ್ಟಾಲಾ ಬುದ್ಧಿ ವಿಚಾರ ಹೇಳಿದರು. ಕೇಳಲಿಲ್ಲ ಸಿದ್ದಾರ್ಥ ತಂದೆಗೆ ಪುನ: ಮೂರು ಪ್ರಶ್ನೆ ಹಾಕಿದನು ಎನೆಂದರೆ ನನಗೆ ಎಲ್ಲ ಸು:ಖ ಸಂಪತ್ತು ಇಟ್ಟಿದಿ ಆದರೆ

1. ನನಗೆ ಎಂದೂ ವೃದ್ಧಪ್ಪ ಬರದಂತಿರಬೇಕು.
2. ನಿತ್ಯವೂ ದು:ಖ ರಹಿತನಾಗಿರಬೇಕು.
3. ನನಗೆ ಮರಣವೆ ಸಂಭವಿಸದೆ ಅಮರ ಜೀವಿಯಾಗಿರಬೇಕು.

ಇವುಗಳನ್ನು ಕರುಣಿಸವುದಾದರೆ ನಾನು ಅರಣ್ಯ ಗಮನವನ್ನು ಬಯಸುದಿಲ್ಲವೆಂದು ತಿಳಿಸಿದನ್ನು ಇದನ್ನು ಕೇಳಿ ತಂದೆ ಶೋದ್ದೋದನ ಸುಮ್ಮನಾದನು. ಒಂದು ದಿನ ರಾತ್ರಿ ಸುಂದರವಾದ ಪತ್ನಿ ಮುದ್ದು ಮಗನನ್ನು ಅರಮನೆಯ ವಿಲಾಸವನ್ನು ತ್ಯಜಿಸಿ ಸಿದ್ದಾರ್ಥ ತನ್ನ ಸೇವಕನ ಸಹಾಯದಿಂದ ರಾಜ್ಯ ತ್ಯಾಗ ಮಾಡಿದ.

ಮೊದಲು ಭರ್ಗ ಆಶ್ರಮಕ್ಕೆ ಹೋದ ಅಲ್ಲಿ ಆತನಿಗೆ ಸರಿ ಕಾಣಲಿಲ್ಲ. ನಂತರ ಮಗದ ರಾಜ್ಯದಲ್ಲಿ ಅರಾಢ ಕಾಲಮನೆಂಬ ತಪಸ್ವಿ ಇದ್ದ. ಇತನಲ್ಲಿಗೆ ಬಂದ ಇತನ್ನು ಶಿಕ್ಷಣ ನೀಡಿದನ್ನು ಆಶೆಯೆ ವಿನಾಶದ ಮೂಲವೆಂಬ ಮಂತ್ರ ಸಿದ್ದಾರ್ಥನ ಮನಸ್ಸಿಗೆ ಒಪ್ಪಿತು. ಮಗದ ರಾಜ್ಯದಿಪತಿ ಬಿಂಬ ಸಾರ ಸಿದ್ದಾರ್ಥನಿಗೆ ತನ್ನ ಎಲ್ಲ ರಾಜ್ಯವನೆ ಕುಡುತ್ತೇನೆ ತಾವು ಇಲ್ಲಿಯೇ ಇರಬೇಕು ಅಂದನು. ಆದರೆ ಸಿದ್ದಾರ್ಥ ಒಪ್ಪಲಿಲ್ಲ. ಆಗ ಬಿಂಬಸಾರನು ಸಿದ್ದಿ ಪಡೆದ ನಂತರ ಬಂದು ತನಗೆ ದರ್ಶನ ನೀಡಬೇಕೆಂದು ಪ್ರಾರ್ಥಿಸಿ ಹಿಂತಿರುಗಿದನು. ಸಿದ್ದಾರ್ಥನು ದೀನರ ಮನೆಯಲ್ಲಿ ಭೀಕ್ಷೆ ಬೇಡಿ ಜೀವನದಲ್ಲಿ ಆಹಾರ ಸೇವಿಸಿದ.

ಸಿದ್ದಾರ್ಥನು ಗಯಾಕೆ ಬಂದನು ಅಲ್ಲಿ 6 ವರ್ಷಗಳ ಕಾಲ ತಪ್ಪಸನಾಚರಿಸಿದನು. ಗಯಾದ ಬಳಿ ಭೋಧಿ ವೃಕ್ಷದ (ಅರಳಿ) ಮರದ ಕೆಳಗೆ ಪೂರ್ವಭಿಮುಖನಾಗಿ ಪದ್ಮಾಸನಹಾಕಿ ಧ್ಯಾನಾಸಕ್ತನಾದನು. ಈ ಸಮಯದಲ್ಲಿ ಆತನಿಗೆ ಅನೇಕ ತೂಂದರೆಗಳಾದವು. ಮಗನ ಹೆಂಡತಿಯ ತಂದೆಯ ಅರಮನೆಯ ನೆನಪು ಆದವು. ಆದರೆ ಸಿದ್ದಾರ್ಥ ತನ್ನ ತಪ್ಪಸು ಬಿಡಲಿಲ್ಲ. 7 ವಾರ ನಿರಾಹಾರಿಯಾಗಿ ನಿರ್ಮಲ ಚಿತ್ತನಾಗಿ ಕುಳಿತು

ಅಂತರ್ಮುಖಿಯಾದನು. 7 ವಾರದ ಅವಧಿ ಮುಗಿಯುತ್ತಾ ಬಂದಿತ್ತು ಅಂದು ವೈಶಾಖ ಶುದ್ಧ ಪೂರ್ಣಿಮೆಯ ದಿನ ಆ ರಾತ್ರಿ ಸಿದ್ಧಾರ್ಥನಿಗೆ ಸಂಕಲ್ಪ ಸಿದ್ಧಿಯಾಯಿತ್ತು.

ಮಾದಲನೆ ದಿನ ಜಾವದಲ್ಲಿ ತನ್ನ ಜನ್ಮಾಂತರಗಳನ್ನೆಲ್ಲಾ ಅರಿತನು. 2ನೇ ಜಾವದಲ್ಲಿ ನಿತ್ಯಾ ನಿತ್ಯ ವಸ್ತುಗಳನ್ನು ವಿವೇಕೋದಯವಾಯಿತು. 3ನೇ ದಿನ ಜರಾಮರಣಗಳ ದು:ಖಕ್ಕೆ ಕ್ಷಣಿಕ ವಸ್ತುಗಳ ತೃಷೆಯೇ ಕಾಣವೆಂಬ ಅನುಭವವಾಯಿತ್ತು.

4ನೇ ಜಾವದಲ್ಲಿ ಸಿದ್ಧಾರ್ಥನಿಗೆ ತತ್ವ ಸಾಕ್ಷಾತ್ಕಾರವಾಯಿತು. ಇಷ್ಟಸಿದ್ಧಿಯಾಯಿತ್ತು. ಜ್ಞಾನ ಚಕ್ಷು ತೆರೆಯಿತು. ಸೂರ್ಯೋದಯವಾಗುವುದರೊಳಗೆ ಸಿದ್ಧಾರ್ಥನು ಬುದ್ಧನಾದನು. ಆನಂದೋದಯವಾಯಿತು.

ಇದುವರೆಗೆ ತಾನು ಅನುಭವಿಸಿದ ಕಷ್ಟ ಪರಂಪರೆಗಳು ಕಣ್ಮರೆಯಾದವು. ನಿತ್ಯಾನಂದ ಮುಕ್ತನಾದನು. ಪ್ರಕೃತಿಯ ಬುದ್ಧನಿಗೆ ಪ್ರಾಣಮ ಸಲ್ಲಿಸಿ ವಿಶ್ವಕ್ಷೇಮಕ್ಕೆ ಶ್ರಮಿಸಲು ಸ್ವಾಗತ ವನಿತ್ತಿತ್ತು. ಜಗತ್ತಿಗೆ ತಾನು ನೀಡಬೇಕಾದ ದರ್ಶನ ಜೋತಿ ಬುದ್ಧನ ಅಂತರಂಗದಲ್ಲಿ ಬೇಳಗಿತ್ತು. ಬುದ್ಧನ್ನು ಆನಂದದಿಂದ ಆತ್ಮ ಸಾಕ್ಷತ್ಕಾರದ ಅನುಭವವನ್ನು ಪಡೆದು ಜನನ ಮರಣ ಬಾಧೆಯ ಬಂಧನದಿಂದ ಬಿಡುಗಡೆ ಹೊಂದಿ ಆಶಾಶೃಂಖಲೆಗಳಿಂದ ಸ್ವತಂತ್ರನಾಗಿ ಚಿತ್ತಾಶುದ್ಧಿಯ ದಿವ್ಯ ಸಂಸ್ಕಾರವನ್ನು ಪಡೆದು ಬುದ್ಧನಾದನು 35ನೇ ವಯಸ್ಸಿನಲ್ಲಿ ಬುದ್ಧನಿಗೆ ಜ್ಞಾನೋದಯವಾಗಿತ್ತು.

ಬುದ್ಧನು ಮಾದಲು ಧರ್ಮ ಬೋಧನೆ ಮಾಡಿದು ಸಾರನಾಥದಲ್ಲಿ ಮಧ್ಯಮ ಮಾರ್ಗ ಬೋಧಿಸಿದರು. ತಾವರೆಯು ನೀರಿನಲ್ಲಿದ್ದರೂ ನೀರಿಗೆ ಅಂಟಿಕೊಂಡಿರುವುದಿಲ್ಲ. ಇದೆ ತಾನು ಭೋದಿಸುವ ಮಧ್ಯಮ ಮಾರ್ಗ. ಬುದ್ಧನು ಪಾದಯಾತ್ರೆ ಮಾಡುತ್ತ ಊರಿಂದ ಊರಿಗೆ ಸಂಚರಿಸುತ್ತ ನಾಲಂದ ಪಾಟೀಲ ಗ್ರಾಮಗಳಿಗೆ ಪಂಚರಿಸಿ ತಮ್ಮ ಬೋಧನೆ ಬೋಧಿಸಿ ಅವುಗಳನ್ನು ಪವಿತ್ರ ಕ್ಷೇತ್ರಗಳಾಗಿ ಮಾರ್ಪಡಿಸಿದ್ದರು. ವೈಶಾಲಿ ನಗರ ಮತ್ತು ಮೇಲ ಗ್ರಾಮಕ್ಕೆ ಆಗಮಿಸಿದರು. ಅನೇಕ ಜನರಿಗೆ ತಮ್ಮ ದೀಕ್ಷೆ ನೀಡಿದರು. ಊರಿಂದ ಊರಿಗೆ ಪ್ರಯಾಣ ಮಾಡಿ ಸಂದೇಶ ಸಾರುತ್ತ ತಮ್ಮ 90 ವಯಸ್ಸಿನಲ್ಲಿ ಸಾಲವನದಲ್ಲಿ ವಿಶ್ರಾಂತಿ ಪಡೆದರು. ಧಾನ್ಯ ಮಗ್ನರಾಗಿ ಮಹಾ ಪರಿ ನಿರ್ಮಾಣ ಹೊಂದಿದರು. ಸತ್ತ ನಂತರ ಅವರ ಅಸ್ಥಿಗಳನ್ನು ಭಾಗ ಮಾಡಿದರು. ಮಗಧ ರಾಜ್ಯದ ಅಜಾತಶತ್ರು ಕಪಿಲವಸ್ತುವಿನ ಕಾಶ್ಯರು. ವೈಶಾಲಿನಗರದಲ್ಲಿ ಛವಿಯರು. ಕುಸಿನಾರ ಗ್ರಾಮದ ಮಲರುರಾಮ ಗ್ರಾಮದ ಕೋಲಿಯರು ಪಾವಾ ಗ್ರಾಮದ ಮಲರು ಆಸ್ಥಿಗಳಲ್ಲಿ ಭಾಗವನ್ನು ಪಡೆದರು. ಈ ಭಾಗಗಳನ್ನು ಚಿತೆಯ ಬೂದಿಯನ್ನು ಸಹ ಬುದ್ಧ ದೇವನ ತತ್ವಾಭಿಮಾನಿಗಳು ತೆಗೆದುಕೊಂಡು ಹೋಗಿ ಸ್ತೋಪಗಳನ್ನು ನಿರ್ಮಿಸಿದರು, ಭಾರತದ ನೂರಾರೂ ಕಡೆಗಳಲ್ಲಿ ಇಂದಿಗೂ ಬೌದ್ಧ ಸ್ತೂಪಗಳು ವಿಹಾರಗಳೂ ಚಿರಸ್ಮರಣೀಯವಾಗಿ ಉಳಿದಿವೆ.

ಬೀದರ ಜಿಲ್ಲೆಯಲ್ಲಿ ಬೌದ್ಧ ವಿಹಾರವು ಮನ್ನಾ ಎಖ್ಖೇಳ್ಳಿ ಗ್ರಾಮಕ್ಕೆ ಬಿಟ್ಟು ಸ್ವಲ್ಪ ದೂರದಲ್ಲಿ ಇದೆ. ಇದಕ್ಕೆ ಮನ್ನಾ ಎಖ್ಖೇಳ್ಳಿ ಮೌಂಟ್ ಎಂದು ಕರೆಯುತ್ತಾರೆ. ಮನ್ನಾ ಎಖ್ಖೇಳ್ಳಿ ಮೌಂಟ್ ವಿಹಾರವು ನೋಡಲು ಅತ್ಯಂತ ಸುಂದರವಾಗಿದೆ, ಅತ್ಯಂತ ವಿಶಾಲ ಪ್ರದೇಶದಲ್ಲಿ ಈ ಬೌದ್ಧ ವಿಹಾರ ವಿದೆ. ಈ ವಿಹಾರದಲ್ಲಿ ದಸರಾದಲ್ಲಿ ಜಾತ್ರೆಯಾಗುತ್ತದೆ. ಅನೇಕ ಕಡೆಯಿಂದ ಅನೇಕ ಜನರು ಈ ಜಾತ್ರೆಗೆ ಬರುತ್ತಾರೆ. ಈ ಜಾತ್ರೆಯಲ್ಲಿ ಬೌದ್ಧ ಭೀಕ್ಷುಗಳು ಬೌದ್ಧ ದೀಕ್ಷೆ ಪಡೆಯುವ ಜನರಿಗೆ ದೀಕ್ಷೆ ಕುಡುತ್ತಾರೆ. ಆದರಿಂದ ಈ ಜಾತ್ರೆಯ ಸಮಯದಲ್ಲಿ ದಸರಾದಲ್ಲಿ ಇಲ್ಲಿ ಅನೇಕ ಜನರು ಬೌದ್ಧ ದೀಕ್ಷ ಪಡೆಯುತ್ತಾರೆ.

ಈ ವಿಹಾರದಲ್ಲಿ ಮದುವೆ ಕೂಡು ಆಗುತ್ತಾರೆ. ಮದುವೆಯನ್ನು ಮಾಡಲು ಎಲ್ಲ ರೀತಿಯ ಅನುಕೂಲ ಇಲ್ಲಿದೆ. ಈ ಬೌದ್ಧ ವಿಹಾರವು ಗುಡ್ಡದ ಮೇಲಿದೆ. ಅನೇಕ ಭೀಡಿಗಳನ್ನು ಹತ್ತಿ ಹೋಗಬೇಕಾಗುತ್ತದೆ. ಈ ವಿಹಾರವು ನೋಡಲು ಅತ್ಯಂತ ಸುಂದರ ಹಾಗೂ ಪ್ರಶಾಂತ ಸ್ಥಳವಾಗಿದೆ. ಅನೇಕ ಕಡೆಯಿಂದ ಅನೇಕ ಜನರು ಈ ಬೌದ್ಧ ವಿಹಾರ ವಿಕ್ಷಿಸಲು ಯಾವಾಗಲು ಬರುತ್ತಾರೆ.

ವಾಲದೊಡ್ಡಿ ಗ್ರಾಮದಲ್ಲಿ ಬೌದ್ಧ ವಿಹಾರವು ವೀಕ್ಷಿಸಲು ಅತ್ಯಂತ ಸುಂದರ ಹಾಗೂ ಭವ್ಯವಾಗಿದೆ.ಈ ಬೌದ್ಧ ವಿಹಾರವು ಗುಡ್ಡದ ಮೇಲೆ ಇದೆ. ಅನೇಕ ಭೀಡಿಗಳನ್ನು ಹತ್ತಿ ಹೋಗಬೇಕಾಗುತ್ತದೆ. ಈ ಬೌದ್ಧ ವಿಹಾರದಲ್ಲಿ ಕೂಡ ಮದುವೆ ಆಗುತ್ತವೆ. ಇಲ್ಲಿ ಕೂಡ ಅನೇಕ ಜನರು ವಿಕ್ಷಿಸಲು ಬರುತ್ತಾರೆ.

# ಅಬ್ದುಲ್ ಫೇಜ ದರ್ಗಾ

ಅಬ್ದುಲ್ ಫೇಜ ದರ್ಗಾ ಇದು ಬೀದರ ನಗರದ ಒಳಗಡೆ ಇದೆ. ಅಬ್ದುಲ್ ಫೇಜ್ ದರ್ಗಾಕ್ಕೆ ಹೋದ ತಕ್ಷಣ ಮೊದಲು ಒಂದು ದೊಡ್ಡ ಭವ್ಯವಾದ ದ್ವಾರವಿದೆ. ಇದರ ಒಳಗಡೆ ಖಾಜ ಅಬ್ದುಲ್ ಫೇಜ ಅವರ ಮಜೀದ ಇದೆ. ಅಬ್ದುಲ್ ಫೇಜ ಇವರು ಗುಲ್ಬರ್ಗಾದವರಾಗಿದರು. ಅಬ್ದುಲ್ ಫೇಜ ಇವರು ಗುಲ್ಬಗಾರದ ಖಾಜ ಬಂದೇನವಾಜ ಅವರ ಅವರ ಮೊಮ್ಮಗಾ ಆಗಿದ್ದಾರೆ. ಇವರು ಚಿಕ್ಕ ವಯಸ್ಸಿನವರಿದ್ದಾಗಲೇ ಗುಲ್ಬರ್ಗಾದಿಂದ ಬೀದರ ನಗರಕ್ಕೆ ಬಂದಿದ್ದರು. ಇಲ್ಲಿಗೆ ಬಂದು ಅವರು ಇಲ್ಲೆ ಉಳಿದರು. ಇಸ್ಲಾಂ ಮತದ ಬಗ್ಗೆ ಹೇಳುತ  ಹಾಗೂ ಕೋನೆಗೆ ಇದೆ ಸ್ಥಳದಲೇ ಐಕ್ಯರಾದ್ದರು. ಅವರು ಐಕ್ಯವಾದ ಸ್ಥಳವೇ ಇಂದು ಅಬ್ದುಲ್ ಫೇಜ ದರ್ಗಾ ಎಂದು ಅವರ ಹೆಸರಿನಿಂದ ಆ ದರ್ಗಾಕ್ಕೆ ಕರೆಯುತ್ತಾರೆ. ಖಾಜ ಅಬ್ದುಲ್ ಫೇಜ್ ಅವರ ಅಣ್ಣ ಗುಲ್ಬರ್ಗಾದಲ್ಲಿದಿದ್ದಾರೆ. ಅವರ ಹೆಸರು ಖಾಜ ಖಬುಲಾಹುಸೇನಿ.

ಬೀದರ ನಗರದಲ್ಲಿ ಅಬ್ದುಲ್ ಫೇಜ ದರ್ಗಾ ಅತ್ಯಂತ ಸುಂದರ ಹಾಗೂ ಭವ್ಯವಾದ ಮಜೀದ ಆಗಿದೆ. ಇದು ಪ್ರಾಚೀನ ಮಜೀದ ಆಗಿದೆ. ಖಾಜ ಅಬ್ದುಲ್ ಫೇಜ ಮಜೀದ ನೋಡಲು ಮೇಲೆ ಗುಮಜ ಇದು. ನಾಲ್ಕು ಕಡೆ ಚೌಕಗಳು ಗೋಲಾಕಾರದಲ್ಲಿದ್ದು, ಅನೇಕ ಹೂ ಬಳ್ಳಿಗಳ ಕಲಾ ಕೃತಿ ಇದೆ. ಮಜೀದ ಒಳಗಡೆ ಮೂರು ಗೋರಿಗಳಿವೆ. ನಂತರ ಎದುರಗಡೆ ಗಾಜೀನ ವೇದಿಕ. ಮೇಲಗಡೆ ಅನೇಕ ಬಣ್ಣ ಬಣ್ಣದ ಲೈಟ್ಸ್‌ಗಳು ಹಾಗೂ ಝೂಮರಗಳಿವೆ. ಈ ಮಜೀದಿನ ಒಳಗಡೆ ಹಾಗೂ ಹೊರಗಡೆ ಗೊಡೆಯ ಮೇಲಿ ಹೊ ಬಳ್ಳಿಗಳ ವರ್ಣರಂಚಿತ ಕಲಾಕೃತಿ ಮಾಡಿದು ಕಲ್ಲಿನಲ್ಲಿ ಕೇತ್ತಿದ್ದು ಕಂಡು ಬರುತ್ತದೆ. ಅಬ್ದುಲ್ ಫೇಜ ದರ್ಗಾದ ಬಾಗಿಲು ಕಲ್ಲಿನಿಂದ ಕೂಡಿವೆ. ಇದರ ಮೇಲೆ ಸುಂದರವಾದ ಕಲೆ ಇದೆ. ಹಾಗೂ ಇದರ ಸುತ್ತ ಮುತ್ತ ಬಣ್ಣ ಬಣ್ಣದ ಟೈಲ್ಸ್‌ಗಳಿಂದ ಹೂ ಬಳ್ಳಿಗಳಿಂದ ಅಲಂಕೃತ ಗೊಂಡಿದೆ. ಕಲ್ಲಿನ ಮೇಲೆ ಕೇತ್ತಿರುವ ಕಲೆ ಕಂಡು ಬರುತ್ತದೆ. ಅಬ್ದುಲ್ ಫೇಜ ದರ್ಗಾ ಅತ್ಯಂತ ಪ್ರಶಾಂತ ಸ್ಥಳವಾಗಿದೆ. ಸುಂದರವಾದ ಕಮಾನಗಳಿಂದ ಕೂಡಿದ ಮೂರು ಕಡೆ ದೊಡ್ಡ ದೊಡ್ಡ ಬಾಗಿಲುಗಳಿವೆ. ಖಾಜ ಅಬ್ದುಲ್ ಫೇಜ್ ದರ್ಗಾ ನೋಡಿದ ವ್ಯಕ್ತಿ ಸಂತಸ ಪಡೆದೆ ಇರಲಾರ.

ಅಬ್ದುಲ್ ಫೇಜ್ ದರ್ಗಾದ ಎದುರಗಡೆ ಸುಂದರವಾದ ಕಲ್ಲಿನ ಎರಡು ಚಿಕ್ಕ ಗೋರಿಗಳಿವೆ. ಇವು ನಿಜಾಮ ಸರಕಾರನ ಮೊಮ್ಮಕಳ ಗೋರಿಗಳಾಗಿವೆ. ಇವರು ಹೈದರಾಬಾದನವರಾಗಿದ್ದರು.  ಈ ಬೀದರ ನಗರ ಅವರ ಜಾಹಂಗಿರ ಆಗಿತ್ತು. ಈ ಗೋರಿಗಳು ಮಕ್ಕಳದಾದ ಕಾರಣ ಚಿಕ್ಕ, ಚಿಕ್ಕ ಆಗಿವೆ. ಆದರೆ ಅವು ಕಲ್ಲುಗಳಿಂದಲೇ ಕೇತ್ತಿದ ಒಂದೆ ಶಿಲೆಗಳ ಗೋರಿಗಳಾಗಿವೆ. ಸುತ್ತ ಮುತ್ತ 12 ಕಲ್ಲಿನ ಕಂಬಗಳಿವೆ. ಇದರ ಒಳಗಡೆ ಎರಡು ಗೋರಿಗಳಿವೆ. 12 ಕಂಬಗಳ ಮೇಲೆ ಕೇತ್ತಿರುವ ಅತ್ಯಂತ ಸುಂದರವಾದ ಕಲಾಕೃತಿ ನೋಡಲು ಇದೆ. ಹನ್ನೆರಡು ಕಂಬಗಳು ಕಲ್ಲಿನಿಂದಲೇ ಕೇತ್ತಿರುವ ಒಳ್ಳೆಯ ಹೂ ಬಳ್ಳಿಗಳಿಂದ ಶಿಲೆಯ ಕಂಬಗಳಾಗಿವೆ. ಇದು ನೋಡಲು ಅತ್ಯಂತ ಸುಂದರ ಆಶ್ಚರ್ಯ ಮೂಡಿಸುತ್ತದೆ. ಕಲ್ಲಿನಲ್ಲೇ ಕಮಾನ ಇದೆ.

ಈ ಕಂಬಗಳು ನಾಲ್ಕುಕಡೆ ಸಮ ಚೌಕ ಇವೆ. ಇದರ ಒಳಗಡೆ ಗೋರಿಗಳಿವೆ. ಹಾಗೂ ಈ ಅಬ್ದುಲ್ ಫೇಜ ಮಜೀದ ಹತ್ತಿರ ಅನೇಕ ಹಳೆಯ ಶಿಲೆಗಳು ಅವುಗಳಿಂದ ಬಳಸಿದ ವಸ್ತುಗಳು ಇವೆ. ಅತ್ಯಂತ ದೊಡ್ಡ ದೊಡ್ಡ ಕಲ್ಲಿನಲ್ಲಿ ಕಡೆದು ಅವರ ದೇವರ ವಸ್ತುಗಳನ್ನು ಬಳಸಲು ಮಾಡಿದ್ದಾರೆ. ಉದುಬತ್ತಿ ಹಚ್ಚುವ ಸ್ಥಳ ಪ್ರಸಾದ ಹಾಕಿ ಇಡುವ ಸ್ಥಳ ಹಾಗೂ ಇತರ ಅನೇಕ ಕಲ್ಲುಗಳಿವೆ. ಅಬ್ದುಲ್ ಫೇಜ್ ದರ್ಗಾದ ಸುತ್ತ ಮುತ್ತ ಇನ್ನೂ ಅನೇಕ ಮಜೀದಗಳಿವೆ. ಈ ಗೋರಿಗಳಲ್ಲಿ ಸ್ವಲ್ಪ ಗೋರಿಗಳು ಸಂಪೂರ್ಣವಾಗಿ ಕಲ್ಲಿನಿಂದಲೇ ಕೇತ್ತಿದ ಗೋರಿಗಳಾಗಿವೆ. ಅವುಗಳ ಮೇಲೆ ಹೂ ಬಳ್ಳಿಗಳ ಕಲೆಯನ್ನು ಕೇತ್ತಿರುವದು ಕಂಡು ಬರುತ್ತದೆ.

ಅಬ್ದುಲ್ ಫೇಜ ದರ್ಗಾದ ಹತ್ತಿರ ನೀರಿನ ವ್ಯವಸ್ಥೆ ಇದೆ. ಇಲ್ಲಿಗೆ ಬಂದ ಅತಿಥಿಗಳಿಗೆ ಕೋಣೆಗಳ ವ್ಯವಸ್ಥೆ ಕೂಡ ಇದೆ. ಇಲ್ಲಿ ಇರಲು ಎಲ್ಲಾ ರೀತಿಯ ಅನುಕೂಲವಿದೆ. ಅಬ್ದುಲ್ ಫೇಜ ದರ್ಗಾದಲ್ಲಿ ಅಕ್ಟೋಬರನಲ್ಲಿ ಜಾತ್ರೆ ಆಗುತ್ತದೆ. ಅಂದು ಅನೇಕ ಜನರು ಸೇರಿರುತ್ತಾರೆ. ಈ ಜಾತ್ರೆ ಮೂರು ದಿವಸ ನಡೆಯುತ್ತದೆ. ಅನೇಕ ಹಿಂದೂ, ಮುಸ್ಲಿಂ ಜನರು ಬಂದು ಇಲ್ಲಿ ಜಾತ್ರೆ ಮಾಡುತ್ತಾರೆ. ಹಾಗೂ ಜನರು ಹರಕೆ ಹೊತ್ತಿ ನಂತರ ಅದು ಪೂರ್ಣಗೊಂಡರೆ ನಂತರ ಇಲ್ಲಿಗೆ ಬಂದು ತಮ್ಮ ಹರಕೆ ತೀರಿಸುತ್ತಾರೆ. ಹಬ್ಬ ಹುಣಿಮೆ ಇದ್ದಾಗ ಅನೇಕ ಜನರು ಈ ಅಬ್ದುಲ್ ಫೇಜ ದರ್ಗಾ ಬರುತ್ತಾರೆ. ಅಬ್ದುಲ್ ಫೇಜ ಮಜೀದ ಹತ್ತಿರದಲೆ ಇನ್ನೊಂದು ಮಜೀದ ಇದೆ. ಇದರಲ್ಲಿ ಐದು ಗೋರಿಗಳಿವೆ. ಇದು ಕೂಡ ನೋಡಲು ಅತ್ಯಂತ ಸುಂದರ ಭವ್ಯಯವಾಗಿದೆ. ಅಬ್ದುಲ್ ಫೇಜ ದರ್ಗಾದ ಸುತ್ತ ಮುತ್ತ ಅನೇಕ ಮಜೀದಗಳಿವೆ. ಈ ದರ್ಗಾದ ಹತ್ತಿರ ಅನೇಕ ದೊಡ್ಡ ದೊಡ್ಡ ಬೇವು, ಅರಳೆ ಮರಗಳಿವೆ. ಇಲ್ಲಿಗೆ ಬಂದ ಪ್ರವಾಸಿಗರಿಗೆ ತಂಪಾದ ನೇರಳು ನೀಡುತ್ತವೆ.

ಅಬ್ದುಲ್ ಫೇಜ ದರ್ಗಾ ನೋಡಿದ ಪ್ರವಾಸಿಗರಿಗೆ ಅತ್ಯಂತ ಸಂತಸ ಆಗುತ್ತದೆ. ಅಬ್ದುಲ್ ಫೇಜ ದರ್ಗಾದ ಹತ್ತಿರದಲ್ಲೆದೊಡ್ಡ ಮುಸ್ಲಿಂರ ನಮಾಜ ಮಾಡುವ ಭವ್ಯವಾದ ಸ್ಥಳವಿದೆ. ಇದು ಕೂಡ ನೋಡಲು ಸುಂದರವಾಗಿದೆ. ಸುತ್ತ ಮುತ್ತ ಕಂಬಗಳಿದು ಒಳಗಡೆ ಪ್ರಶಾಂತವಾದ ಸ್ಥಳವಿದೆ. ಅಲ್ಲಿಗೆ ಮುಸ್ಲಿಂ ಜನರು ಬಂದು ನಮಾಜ ಮಾಡುತ್ತಾರೆ. ಅತ್ಯಂತ ಸುಂದರವಾದ ಭವ್ಯವಾದ ಬಣ್ಣ ಬಣ್ಣದಿಂದ ಈ ಭವನ ಇದೆ. ಅಬ್ದುಲ್ ಫೇಜ್ ದರ್ಗಾ ಬೀದರ ನಗರದಲ್ಲಿ ನೋಡಲು ಅತ್ಯಂತ ಸುಂದರವಾದ ಮಜೀದ ಆಗಿದೆ. ಈ ಮಜೀದದ ಒಳಗಡೆ ಹೆಣ್ಣು ಮಕ್ಕಳನ್ನು ಬಿಡುವುದಿಲ್ಲ ಇದು ಅವರ ಸಂಸ್ಕೃತಿಯಾಗಿದೆ. ಇಸ್ಲಾಂ ಜನರ ಅವರದೆಯಾದ ನೀತಿನಿಯಮ ಆಚರಣೆಗಳಿರುತ್ತವೆ.

## ಮುಲ್ತಾನಿ ಪಾಶದರ್ಗಾ

ಮುಲ್ತಾನಿ ಪಾಶದರ್ಗಾ ಇದು ಬೀದರ ನಗರದ ಮಧ್ಯದಲ್ಲೇ ಇದೆ. ಇಲ್ಲಿಗೆ ಹೋದ ತಕ್ಷಣ ದೊಡ್ಡ ಭವ್ಯವಾದ ದ್ವಾರವಿದೆ. ಇದರ ಮುಂದೆ ಅಂದರೆ ದ್ವಾರದ ಎದುರಗಡೆ ನೀರಿನ ಕಾರಂಜಿಯ

ಸ್ಥಳವಿದೆ. ದ್ವಾರದ ಒಳಗಡೆ ಸಮಭಾಗದಲ್ಲಿ ಕೋಣೆಗಳಿವೆ. ಈ ಕೋಣೆಗಳು ಫಕೀರಗಳು ಇರುವ ಸ್ಥಳವಾಗಿದೆ. ನಂತರ ಸ್ವಲ್ಪ ಒಳಗಡೆ ಅನೇಕ ಮುಸ್ಲಿಂ ಜನರ ಗೋರಿಗಳಿವೆ. ನಂತರ ಒಳಗಡೆ ಮುಲ್ತಾನಿ ಪಾಶನವರ ದರ್ಗಾ ಇದೆ. ಇದೂ ದೊಡ್ಡ ಮಜೀದ ಆಗಿದೆ. ಇದು ಕುಡ ನೋಡಲು ಅತ್ಯಂತ ಸುಂದರವಾಗಿದೆ. ಮಜೀದನ ಎಡಗಡೆ ಬಲಗಡೆ ದೊಡ್ಡ ದೊಡ್ಡ ಕಲ್ಲಿನ ಕಂಬಗಳಿವೆ. ದ್ವಾರ ಕುಡ ಅತ್ಯಂತ ಸುಂದರವಾಗಿದೆ. ಈ ಮಜೀದ ಒಳಗಡೆ ಕುಡ ಹೆಣ್ಣು ಮಕ್ಕಳನ್ನು ಬಿಡುವುದಿಲ್ಲ. ಸ್ತ್ರಿಯರು ಹೋರಗಡೆನೆ ನಿಲ್ಲಬೇಕು. ಇಲ್ಲಿ ಕುಡ ಜಾತ್ರೆ ಆಗುತ್ತದೆ. ಹಾಗೂ ಜನರು ಹರಕೆ ಹೋತು ನಂತರ ಅದು ಪೂರ್ಣಗೊಂಡರೆ ಪುನಃ ಮತ್ತೆ ಅಲ್ಲಿಗೆ ಬಂದು ತಮ್ಮ ಹರಕೆ ತೀರಿಸುತ್ತಾರೆ. ಈ ದರ್ಗಾಕ್ಕೆ ಹಿಂದು ಮುಸ್ಲಿಂ ಎಲ್ಲ ಜನಾಂಗದವರು ಬರುತ್ತಾರೆ. ಹಬ್ಬ ಹುಣ್ಣಿಮೆ ಇದ್ದಾಗ ಎಲ್ಲ ಜನಾಂಗದ ಜನರು ಈ ದರ್ಗಾಕ್ಕೆ ಬರುತ್ತಾರೆ. ಈ ದರ್ಗಾ ಬೀದರ ನಗರದಲ್ಲಿ ನೋಡಲು ಅತ್ಯಂತ ಸುಂದರ ಹಾಗೂ ಪ್ರಾಚೀನವಾಗಿದೆ.

# ಅಷ್ಟೂರ ಚೌಖಂಡಿ

ಅಷ್ಟೂರ ಚೌಖಂಡಿ ಬೀದರ ನಗರದಿಂದ 2 ಕಿ.ಮೀ. ದೂರದಲ್ಲಿದೆ. ದಕ್ಷಿಣ ದಕ್ಕಿನಲ್ಲಿದೆ ಚೌಖಂಡಿ ಇದು ರಹಮತ ಉಲ, ಕಿರಮಾನಿ ಬಾಬನವರ ಮಜೀದ ಆಗಿದೆ. ರಹಮತ ಉಲ್ ಶಿರಮಾನಿ ಬಾಬನವರು ಇರಾನ ದೇಶದ ಕಿರಮಾನ ಎಂಬ ಊರಿನವರು. ರಹಮತ ಉಲ್ ಕಿರಮಾನಿ ಬಾಬ ಇಸ್ಲಾಮಿಕ ಧರ್ಮ ಗುರುಗಳಾಗಿದರು. ಆದರಿಂದ ಇವರನ್ನು ಬೀದರ ಅರಸ ಅಹಮ್ಮದ ಶಾವಲಿಯು ಇವರನ್ನು ಬೀದರ ನಗರಕೆ ಕರೆಸಿದರು. ಸುಲ್ತಾನ ಅಹಮ್ಮದಶ ಕಿರಮಾನಿ ಬಾಬನವರನ್ನು ಬಹಳ ಪ್ರೇಮದಿಂದ ಸ್ವಾಗತ ಮಾಡಿದರು.

ರಹಮತ ಉಲ್ ಕಿರಮಾನಿಬಾಬ ಇವರು ಬೀದರ ನಗರಕ್ಕೆ ಬಂದ ನಂತರ ಮುಸ್ಲಿಂ ಧರ್ಮ ಬಗ್ಗೆ ಜನರಿಗೆ ಹಾಗೂ ಅರಸ ಅಹಮ್ಮದ ಶಾವಲಿಯನು ಧರ್ಮ ಭೋಧನೆ ನೀತಿ ಹೇಳುತ್ತಿದ್ದರು. ಅಹಮ್ಮದ ಶಾವಲಿಯ ಧರ್ಮ ಗುರು ಈ ಕಿರಮಾನಿ ಬಾಬನವರಾಗಿದರು. ಇವರು ಎಷ್ಟೋ ದಿವಸ ಇಲ್ಲೇ ಇದ್ದರು. ನಂತರ ಬೀದರ ನಗರದಲ್ಲಿ ಜನರು ಮಾಂಸ ತಿನ್ನುತ್ತಿದ್ದರು. ಇದು ಕಿರಮಾನಿ ಬಾಬನವರಿಗೆ ಇಷ್ಟಬರಲಿಲ್ಲ. ನಂತರ ಅವರು ಬೀದರ ನಗರ ಬಿಟ್ಟು 2 ಕಿ.ಮೀ. ದೂರದಲ್ಲಿ ಪ್ರಶಾಂತವಾದ ಸ್ಥಳದಲ್ಲಿ ಇರುತ್ತಿದ್ದರು. ಜನರು ಅವರು ಇರುವ ಸ್ಥಳಕ್ಕೆ ಬರುತ್ತಿದ್ದರು. ಅರಸ ಕೂಡ ಅವರು ಇದ ಸ್ಥಳಕ್ಕೆ ಬರುತ್ತಿದೆ.

ಎಷ್ಟೂ ದಿವಸಗಳಾದ ನಂತರ ಕಿರಮಾನಿ ಬಾಬನವರು ಅದೆ ಸ್ಥಳದಲ್ಲಿ ಐಕ್ಯವಾದರು ಅವರು ಸತ್ತನಂತರ ಅವರ ಸಮಾದಿ ಆದೆ ಸ್ಥಳದಲ್ಲಿ ಕಟ್ಟಿಸಿದರು. ಅದೆ ಈ ಚೌಖಂಡಿ ಆಗಿದೆ. ಕರಿಮಾನಿ ಬಾಬನವರ ಮಜೀದ ನಡುವೆ ಇದೆ ಇವರ ಸಮಾದಿಯ ಸುತ್ತಲು ಇನ್ನು ಅನೇಕ ಸಮಾದಿಗಳಿವೆ ಇವೇಲ್ಲ ಆವರ ಶಿಷ್ಯರ ಸಮಾಧಿಗಳಾಗಿವೆ. ಕಿರಮಾನಿ ಬಾಬ ತಮ್ಮ ದೇಶಕ್ಕೆ ಹೋಗಬೇಕೆಂದಾಗ ಅವರನ್ನು ಅಹಮ್ಮದಶವಲಿ ಅವರನ್ನು ಹೊಗಗುಡಲಿಲ್ಲ. ತಮ್ಮ ಹತ್ತಿರದಲ್ಲೆ ಇಟ್ಟಿಕೊಂಡು ಅವರಿಗೆ ಬೇಕಾದ ಸವಲತ್ತು ನೀಡಿದರು. ಈ ಚೌಖಂಡಿಯಲ್ಲಿ ಹಜರತ ಖಲಿ ಉಲಾನ ಗೋರಿಯು ಇವೆ.

ಚೌಖಂಡಿಯ ಹತ್ತಿರ ಹೋದ ನಂತರ ಮೊದಲ ಬಾಗಿಲ ಹತ್ತಿರ ಸಮಭಾಗದಲ್ಲಿ ಅನೇಕ ಮಜೀದಗಳಿವೆ. ನಂತರ ಸ್ವಲ್ಪ ಮುಂದೆ ಅನೇಕ ಛೀಡಿಗಳಿವೆ ನಂತರ ಮೇಲ ಚೌಖಂಡಿ ಇದೆ. ಕಿರಿಟದಂತೆ ಈ ಚೌಖಂಡಿ ಕಟ್ಟಿದ್ದಾರೆ. ಈ ಚೌಖಂಡಿಯ ದರ್ಗಾ ಬಹಮನಿ ಆರಸ ಅಹಮ್ಮದ್ ಶಾವಲ್ಲಿ ಕಟ್ಟಿಸಿದ್ದಾನೆ. ಹೊರಗಡೆಯ ಚೌಖಂಡಿಯನ್ನು ಅಲಿಬರಿದಶ ಕಟ್ಟಿಸಿದ್ದಾನೆ. ಈ ಚೌಖಂಡಿ ನೋಡಲು ಅತ್ಯಂತ ಸುಂದರ ಹಾಗೂ ಭವ್ಯವಾಗಿದೆ. ಇದು ಅತ್ಯಂತ ಆಕರ್ಷಕ ಮಜೀದ ಆಗಿದೆ.

ಕಿರಮಾನಿ ಬಾಬನವರ ತಲೆಯ ಮೇಲಿನ ಕಿರಟ ಎಂಟು ಭಾಗ ಇದ್ದಿತು. ಎಂಟು ಭಾಗಕ್ಕೆ ಅಷ್ಟಪ ಪಹಲ ಎಂದು ಕರೆಯುತ್ತಾರೆ. ಅಷ್ಟಪ ಪಹಲ ಎಂಬ ಹೆಸರಿನಿಂದ ಅಷ್ಟೂರ ಎಂಬ ಹೆಸರು ಬಂದಿದೆ.

ಸಧ್ಯಕ್ಕೆ ಅಷ್ಟೂರ ಎಂದು ಇಲ್ಲಿಯ ಗ್ರಾಮದ ಹೆಸರಾಗಿದೆ. ಕಿರಮಾನಿ ಬಾಬನವರ ಕಿರೀಟ ಎಂಟು ಭಾಗ ಇದ್ದಕಾರಣ ಕಿರೀಟದಂತೆ ಈ ಚೌಖಂಡಿ ಎಂಬ ಹೆಸರು ಬಂದಿದೆ. ಈ ಚೌಖಂಡಿಯ ದ್ವಾರದ ಮೇಲೆ ಅರೇಬಿಯನ ಅಡಿಯಲ್ಲಿ ಕನೇರ ಕಲ್ಲಿನ ಮೇಲೆ ಕುರಾನಿನ ವಾಕ್ಯ ಬರೆದಿದ್ದಾರೆ. ಈ ಚೌಖಂಡಿಯ ಮೇಲೆರಲು ದಾರಿ ಈ ಚೌಖಂಡಿಯ ಇದೆ. ಇದು ಕತ್ತಲೆಯ ದಾರಿಯಾಗಿದೆ. ಒಬ್ಬರಿಗೆ ಹೋಗಲು ಬರಲು ಬರುತ್ತದೆ. ನೋಡಲು ಅತ್ಯಂತ ಸುಂದರವಾಗಿದೆ.

ಈ ಚೌಖಂಡಿಯ ಹತ್ತಿರದಲ್ಲೆ ಪರಿಭಾವಿ (ಭಾವಿ) ಇದೆ ಇದು ಚೌಖಂಡಿಯ ಆಕಾರ ಯಾವ ರೀತಿ ಇದೆ. ಅದೇ ಪ್ರಕಾರದಲ್ಲಿ ಈ ಭಾವಿ ಕಟ್ಟಲಾಗಿದೆ. ಈ ಚೌಖಂಡಿಯಲ್ಲಿ ಹುಣಿಮ್ಮೆ ಅಮಾವಾಸೆ ಹಬ್ಬಗಳಿದ್ದಾಗ ಜನರು ಇಲ್ಲಿಗೆ ಬರುತ್ತಾರೆ. ಜನರು ತಮ್ಮ ಮನಸ್ಸಿನಲ್ಲಿದ್ದನು. ಬೇಡಿಕೊಂಡು ನಂತರ ಹರಕೆ ಪೂರ್ಣಗೊಂಡ ಇಲ್ಲಿಗೆ ಬಂದು ತಮ್ಮ ಹರಕೆ ತೀರಿಸುತ್ತಾರೆ. ಹಾಗೂ ಮೈಯಲ್ಲಿ ಏನಾದರೂ ಇದ್ದರೆ ಇಲ್ಲಿಗೆ ಬಂದ ಜನರಿಗೆ ಕಡಿಮೆ ಆಗುತ್ತದೆ ಎಂಬ ನಂಬಿಕೆ ಜನರಲ್ಲಿದೆ ಅದರಿಂದ ಜನರು ಇಲ್ಲಿಗೆ ಯಾವಗಲೂ ಬರುತ್ತಾರೆ.

ಚೌಖಂಡಿ ಅತ್ಯಂತ ಪ್ರಶಾಂತ ಸುಂದರ ಸ್ಥಳವಾಗಿದೆ. ಊರ ಬಿಟ್ಟು ಹೊರಗಡೆ ಇದೆ. ಅಷ್ಟೂರ ಗ್ರಾಮ ಇನ್ನು ಮುಂದಗಡೆ ಇರುತ್ತದೆ. ಈ ಚೌಖಂಡಿಯನ್ನು ವೀಕ್ಷಿಸಲು ಅನೇಕ ಜನರು ಬರುತ್ತಾರೆ. ಹಿಂದು ಮುಸ್ಲಿಂ ಎಲ್ಲ ಜನಾಂಗದವರು ಇಲ್ಲಿಗೆ ಬರುತ್ತಾರೆ. ಹಾಗೂ ಚೌಖಂಡಿಯನ್ನು ವೀಕ್ಷಿಸಲು ವಿದೇಶಿಗಳು ಕುಡ ಬರುತ್ತಾರೆ. ಹಾಗೂ ಈ ಚೌಖಂಡಿಯ ಮೇಲೆ ಅತ್ಯಂತ ಸುಂದರವಾದ ಹೂಗಳ, ಬಳ್ಳಿಗಳ, ಚಿತ್ರಗಳ ಕಲೆ ಇದೆ.

ಕಿರಮಾನಿ ಬಾಬ ಅಹಮ್ಮದ ಷಾವಲಿಯ ಧರ್ಮ ಗುರುವಾದ ಕಾರಣ ಗುರುವಿನ ಮಜೀದ ಮೇಲಗಡೆ ಇದೆ. ಶಿಷ್ಯನಾದ ಅಹಮ್ಮದ್‌ಷಾನ ಮಜೀದ ಕೆಳಗಡೆ ಇದೆ. ಈ ಮಜೀದಕ್ಕೆ ಅಷ್ಟೂರ ಅಲ್ಲಂ ಪ್ರಭು ಮಜೀದ ಎಂದು ಕರೆಯುತ್ತಾರೆ. ಸತ್ತ ನಂತರ ಇವರು ಕೂಡ ತಮ್ಮ ಸಮಾದಿಯನ್ನು ಒಂದೆ ಕಡೆ ಇದ್ದೂ. ಹಾಗೂ ಗುರುವಿನ ಮಜೀದ ಮೇಲಗಡೆ ಇರಲೆಂದ ಹಾಗೂ ಶಿಷ್ಯನ ಮಜೀದ ಕೆಳಗಡೆ ಇರಲೆಂದು ಈ ರೀತಿ ಒಂದೆ ಸ್ಥಳದಲ್ಲಿ ಮೇಲೆ ಕೆಳಗೆ ಕಟ್ಟಿದಾರೆ.

## ಅಷ್ಟೂರ ಗುಮ್ಮಜಗಳು

ಅಷ್ಟೂರ ಗ್ರಾಮವು ಬೀದರ ನಗರದಿಂದ ನಾಲ್ಕು ಕಿ.ಮೀ. ದೂರದಲ್ಲಿದೆ. ಈ ಅಷ್ಟೂರ ಗ್ರಾಮ ಇನ್ನು ಮುಂದೆ ಇರುತ್ತದೆ. ರಸ್ತೆಯ ಹತ್ತಿರದಲ್ಲಿ ಅಷ್ಟೂರ ಗುಮ್ಮಜಗಳಿವೆ. ಬೀದರ ಕೋಟೆಯನ್ನು ಆಳಿದ ಎರಡು ರಾಜ್ಯ ಮನೆತನಗಳ ರಾಜಕಾರಣಿಯರ ಹಾಗೂ ಅವರ ಸಂಬಂಧಿಗಳ ಅನೇಕ ಭವ್ಯ ಸಮಾಧಿಗಳು ಇವೆ. ಇದರಲ್ಲಿ ಪ್ರಮುಖ್ಯವಾಗಿ ಬಹಮನಿ ಸಾಮ್ರಾಜ್ಯದ ರಾಜ್ಯದಾನಿಯನ್ನು ಗುಲ್ಬರ್ಗಾದಿಂದ ಬೀದರಗೆ ವರ್ಗಾಯಿಸಿದ ಅಹಮದಶಾವಲಯ ಗುಮ್ಮಜ ಆಗಿದೆ. ಹಾಗೂ ಇವರ ಹೆಂಡತಿ ನೋರಜಹ ರಫತ್

ಬೇಗಮ್ ಇವಳ ಗುಮ್ಮಜ ಕೆಳಗಡೆ ಇದೆ. ಇದರ ಹತ್ತಿರದಲ್ಲಿ ಅಲ್ಲಾವುದ್ದೀನ ಬಹಮನ ಷಾನ ಗುಮ್ಮಜ ಇದೆ. ಇದು ಸಿಡಿಲಿನ ಹೊಡೆತಕ್ಕೆ ಸಿಕ್ಕು ಅರ್ಧಕ್ಕಿಂತ ಹೆಚ್ಚು ಬಿದ್ದು ಹೋಗಿದೆ. ಈ ಗುಮ್ಮಜ ಹತ್ತಿರದಲ್ಲಿ ಹುಮಾಯೂನ ಷಾ ಬಹಮನಿಯ ಗುಮ್ಮಜ ಇದೆ. ಇದರ ಹತ್ತಿರದಲ್ಲಿ ನಿಜಂ ಷಾ ಬಹಮನಿಯ ಗುಮ್ಮಜ ಇದೆ. ಇದರ ಹತ್ತಿರದಲ್ಲಿ ಮಹಮ್ಮದ ಷಾ ಬಹಮನಿ ಗುಮ್ಮಜ ಇದೆ. ಹಾಗೂ ಕಲಿಮ ಉಲ್ ಅಲಿಮ ಉಲ್ ಬಹಮನಿಗಳ ಗುಮ್ಮಜಗಳ ಎದುರು ಬಿದಿರು ಇವೆ. ಇದರ ಎದುರಗಡೆ ಹಶೇನಷಾ ಬಹಮನಿಯ ಗುಮ್ಮಜ ಇದೆ.

ಅಹೇಮದಷಾವಲಿ ಧರ್ಮ ಸೆಹಿಷ್ಟು ಆಗಿದ. ಆತನ ಧರ್ಮ ಗುರು ರಹಮತ ಉಲ ಕಿರಮಾನಿ ಬಾಬ ಆಗಿದರು. ರಹಮತ ಉಲ್‌ಕಿರ ಮಾನಿಬಾಬನವರಿಗೆ ಅಹಮ್ಮದ ಷಾವಲ್ಲಿ ಇರಾನ ದೇಶದಿಂದ ಬೀದರ ಜಿಲ್ಲೆಗೆ ಕರೆಸಿದ ಅಹಮ್ಮದ ಷಾ ಈ ಗುರುವಿನಿಂದ ವಿದ್ಯಾ ಕಲಿತಿದ್ದನಂತರ ಕಿರಮಾನಿ ಬಾಬನವರಿಗೆ ಇರಾನ ದೇಶಕ್ಕೆ ಕಳಿಸಲಿಲ್ಲ. ತಮ್ಮ ಹತ್ತಿರದಲ್ಲಿ ಇರಲು ಹೇಳಿದನು.ಅವರು ಹಾಗೆ ಮಾಡಿದರು. ಆದಕಾರಣ ಗುರುವಿನ ಗುಮ್ಮಜ ಮೇಲಗಡೆ ಇರಬೇಕೆಂದು ರಹಮತ ಉಲ್‌ಕಿರಮಾನಿ ಬಾಬ ನವರ ಗುಮ್ಮಜ (ಚೌಖಂಡಿ) ಮೇಲಗಡೆ ಇದೆ. ಕೆಳಗಡೆ ಅಹಮ್ಮದ ಷಾ ಅಲ್ಲಿಯ ಗುಮ್ಮಜ ಇದೆ.

ಅಹಮ್ಮದ ಷಾ ವಲಿಯ ಗುಮ್ಮಜ ಹಿಂದೂ ಮುಸ್ಲಿಂ ಏಕತೆಯ ಸಂಕೇತವಾಗಿದ್ದು ಇಲ್ಲಿ ವರ್ಷಕೊಮ್ಮೆ ಜಾತ್ರೆ ನಡೆಯುತ್ತದೆ. ಇದಕ್ಕೆ ಅಷ್ಟೂರ ಅಲಂಪ್ರಭು ಜಾತ್ರೆ ಎಂದು ಕರೆಯುತ್ತಾರೆ. ಪ್ರತಿ ವರ್ಷ ಆಳಂದದಿಂದ ಸ್ವಾಮಿ ಇಲ್ಲಿಗೆ ಬರದಿದ್ದರೆ ಜಾತ್ರೆ ನಡೆಯುವುದಿಲ್ಲ. ಆತ ಬಂದ ನಂತರವೆ ಜಾತ್ರೆ ಆಗುತ್ತದೆ.

ಅಲ್ಲಂಪ್ರಭು ಜಾತ್ರೆಯು ಇದು ಹೋಳಿ ಹುಣ್ಣಿಮೆ ಆದ ನಂತರ ಸ್ವಲ್ಪ ದಿವಸಕ್ಕೆ ಆಗುತ್ತದೆ. ಈ ಜಾತ್ರೆ ಐದು ದಿವಸ ನಡೆಯುತ್ತದೆ. ಐದು ದಿವಸ ವಿಶೇಷ ಪೂಜ್ಯ ನಡೆಯುತ್ತದೆ. ಆಳಂದದಿಂದ ಸ್ವಾಮಿ ಯಾಕ ಬರುತ್ತಾರೆ ಎಂದರೆ ? ಅಹಮ್ಮದ ಷಾವಲಿಯ ಆಸ್ತಿ (ವಜೀರ) ಆಳಂದದಲ್ಲಿತ್ತು. ಹೊಲ ಗದ್ದೆ ಆಸ್ತಿ. ಎಲ್ಲವನ್ನು ಅಹಮ್ಮದ ಷಾ ಈ ಸ್ವಾಮಿ ಮನೆತನದವರಿಗೆ ಕೋಟಿದ್ದ, ಇದರ ಪ್ರತೀಕವಾಗಿ ಆ ಸ್ವಾಮಿಗಳು ನಾವು ನಿಮಗೆ ಏನು ಕುಡಬೇಕು ಎಂದು ತಿಳಿದು. ನಾವು ಇರುವ ತನಕ ನಿಮ್ಮ ಸೇವೆ ಪೂಜೆ ಮಾಡುತ್ತೇವೆ ಎಂದು ಅಂದಿನಿಂದ ಆ ಸ್ವಾಮಿ ಮನೆತನದವರು ಆಳಂದದಿಂದ ಅಹಮ್ಮದ ಷಾ ವಲಿಯ ಗುಮ್ಮಜಕ್ಕೆ ಅವರು ಬರುತ್ತಾರೆ.

ಸ್ವಾಮಿ ಆಳಂದದಿಂದ ಪಾದಯಾತ್ರೆ ಮಾಡುತ್ತ ಬರುತ್ತಾರೆ. ಜೊತೆಯಲ್ಲಿ ಒಂದು ದೊಡ್ಡ ಕೇಸರಿ ಛಡ ಎರಡು ಎಕಮಾಯಿ ದೇವಿ ಪೂಟುಗಳು ತೆಗೆದುಕೊಂಡು ಬರುತ್ತಾರೆ. ಬರುವಾಗ ಕಮತಾಣ ಗ್ರಾಮದಲ್ಲಿ ಅಲ್ಲಮ ಪ್ರಭುವಿನ ಪಾದ ಸ್ಥಾಪನೆ ಇದೆ. ಆದ್ದರಿಂದ ಅಲ್ಲಿ ಅಲ್ಲಂ ಪ್ರಭುವಿನ ಪಾದಪೂಜೆ

ಮುಗಿಸಿಕೊಂಡು ಹಾಗೂ ಅಲ್ಲೆ ಒಂದು ಹೋಲದಲ್ಲಿ ಪ್ಯುಂಡೆ ಪಲ್ಯ, ಮೆಂತಿ ಪಲ್ಯ ಬೀಜ ಹಾಕಿ ಅಲಿಂದ ನಂತರ ಅಷ್ಟೂರ ಗ್ರಾಮದ ಅಲ್ಲಂ ಪ್ರಭುವಿನಲ್ಲಿಗೆ ಬರುತ್ತಾರೆ.

ಇಲ್ಲಿಗೆ ಬಂದ ನಂತರ ಪೂಜೆ ಪ್ರಾರಂಭಿಸುತ್ತಾರೆ. ಆ ಸ್ವಾಮಿಯು ಬರುವ ತನಕ ಪೂಜೆ ಯಾರು ಮಾಡುವುದಿಲ್ಲ. ಆ ಸ್ವಾಮಿಯು ಬಂದು ದೇವರಿಗೆ ಗಂಥ ಹಚ್ಚುತ್ತಾನೆ. ಶಂಖ ಉದುತ್ತಾನೆ. ಆತನ ಪೂಜೆ ಆದನಂತರ ಹಿಂದೂ ಮುಸ್ಲಿಂ ಎಲ್ಲ ಜನಾಂಗದ ಜನರು ಪೂಜೆ ಮಾಡುತ್ತಾರೆ. ಇದು ಪರಂಪರೆ ಇಂದ ನಡೆದು ಬಂದ ಸಂಪ್ರಾದಾಯವಾಗಿದೆ ಇಂದು ಕೂಡ ಈ ಪರಂಪರೆ ಮುಂದುವರೆದುಕೊಂಡೆ ಇದೆ.

ಅನೇಕ ಭಕ್ತರು ಜನರು ಹಿಂದುಗಳು ಮುಸ್ಲಿಂ ಜನರು ಅಲ್ಲಂ ಪ್ರಭುವಿನ ಗುಮ್ಮಜ ಎದುರಗಡೆ ಅನೇಕ ದೀಪಗಳನ್ನು ಹಚ್ಚುತ್ತಾರೆ. ಈ ದೀಪಗಳು ಎರಡು ಮೂರು ದಿವಸ ತನಕ ಉರಿಯುತ್ತವೆ. ಹಾಗೂ ಸ್ವಾಮಿಯನ್ನು ಅಷ್ಟೂರ ಗ್ರಾಮದ ತುಂಬ ಮೇರೆಸುತ್ತಾರೆ. ರಾತ್ರಿ ಭಜನೆ, ಕೀರ್ತನೆ ಇದು ಹಿಂದು ಮುಸ್ಲಿಂ ಎಲ್ಲ ಜಾತಿ ಜನಾಂಗದವರು ಮಾಡುತ್ತಾರೆ.

ಐದನೆಯ ದಿವಸದ ಮುಂಜಾನೆ ಸ್ವಾಮಿ ತಮ್ಮ ಊರಿಗೆ ಹೋಗುವಾಗ ಕಮಠಾಣ ಗ್ರಾಮದಲ್ಲಿ ಬಿತ್ತಿ ಬಂದಂತಹ ಮೆಂತಿ ಪಲ್ಯ ಪುಂಡ್ಯ ಪಲ್ಯಯನ್ನು ಅಡುಗೆ ಮಾಡಿ ಅಲೆ ಊಟ ಮಾಡಿ ನಂತರ ತಮ್ಮ ಊರಿಗೆ ಹೋಗುತ್ತಾರೆ. ಇದು ನಿಯಮವಾಗಿದೆ. ಇದು ಪರಂಪರೆಯಿಂದ ನಡೆದು ಬಂದಿದೆ.

ಈ ಸ್ವಾಮಿ ಹೋದ ನಂತರ ಐದನೆ ದಿವಸ ಅಷ್ಟೂರ ಗ್ರಾಮದಲ್ಲಿ ಜಾತ್ರೆ ಆಗುತ್ತದೆ. ಅಲ್ಲಂ ಪ್ರಭು ಗುಮ್ಮಜದ ಸಮ್ಮುಖದಲ್ಲಿ ನಡೆಯುತ್ತದೆ. ಮುಂಜಾನೆ ಕುಸ್ತಿ ನಡೆಯುತ್ತದೆ. ಊಟ ಕೂಡ ಇರುತ್ತದೆ. ಎಲ್ಲಾ ಕಡೆಯಿಂದ ಜನರು ಬರುತ್ತಾರೆ. ಎಲ್ಲ ಜನಾಂಗ ಜಾತಿಯ ಜನರು ಇಲ್ಲಿ ಬಂದು ಜಾತ್ರೆ ಮಾಡುತ್ತಾರೆ. ಹಿಂದು ಮುಸ್ಲಿಂ ಜನರು ಅತ್ಯಂತ ಹರ್ಷದಿಂದ ಈ ಜಾತ್ರೆಯನ್ನು ಮಾಡುತ್ತಾರೆ.

# ಮಹಮ್ಮದ ಗವಾನ (ಮದರಸಾ) ವಿದ್ಯಾಲಯ

## ಮಹಮ್ಮದ ಗವಾನನ ಜೀವನ

ಬಹಮನಿ ರಾಜ್ಯದ ಇತಿಹಾಸದಲ್ಲಿ ಮಹಮ್ಮದ ಗವಾನ ಅತ್ಯಂತ ಹೆಸರಾಂತ ವ್ಯಕ್ತಿ ಗವಾನ ಪ್ರಧಾನ ಮಂತ್ರಿಯಾಗಿ ಧೀರ ಸೈನಿಕನಾಗಿ ಬಹಮನಿ ರಾಜರ ಆಪ್ತ ಸೇವಕನಾಗಿ ಸೇವೆ ಸಲ್ಲಿಸಿ, ಬಹಮನಿ ರಾಜ್ಯದ ಘನತೆಗೆ ಹಾಗೂ ಏಳಗೆಗೆ ಕಾರಣನಾಗಿದ್ದಾನೆ. ಗವಾನನ ಪ್ರಮಾಣಿಕತನ ಶ್ರದ್ಧೆ, ನಿಷ್ಠೆ, ಧೀರತನ ಮುಂತಾದವುಗಳು ಅವನ ವ್ಯಕ್ತಿತ್ವವನ್ನು ಇನ್ನಷ್ಟು ಹೆಚ್ಚಿಸಿದವು ಅಂತೆಯೇ ಮಹಮ್ಮದ ಗವಾನ ಬಹಮನಿ ರಾಜ್ಯದ ಧೀರ ವ್ಯಕ್ತಿಗಳ ಮಾಲಿಕೆಯಲ್ಲಿ ಉನ್ನತ ಸ್ಥಾನಗಳಿಸಿದ್ದಾನೆ.

ಐತಿಹಾಸಿಕ ದಾಖಲೆಗಳ ಮೇಲೆ ಹೇಳುವದಾದರೆ ಮಹಮ್ಮದ ಗವಾನ ಇರಾಣ ದೇಶದಿಂದ ಭಾರತಕ್ಕೆ ಬಂದನೆಂದು ನಂಬಲಾಗಿದೆ. ಗವಾನ ಇರಾಣದ ಗಿಲನ ಎಂಬ ಪ್ರಾಂತದ ಖಾವಾನ ಎಂಬ ಹಳ್ಳಿಯಲ್ಲಿ ಜನಿಸಿದನೆಂದು ತಿಳಿದಿದೆ. ಖಾವಾನ ಎಂಬ ಹಳ್ಳಿಯ ಹೆಸರಿನಿಂದಲೇ ಅವನಿಗೆ ಗವಾನ ಎಂಬ ಹೆಸರು ರೂಢಿಯಲ್ಲಿ ಬಂದಿತು. ಮಹಮ್ಮದ ಗವಾನ ಜನಿಸಿದ ಕಾಲ ಕ್ರಿ.ಶ. 1405 ಗವಾನನ ಮನೆತನ ಶ್ರೀಮಂತಿಕೆಯಲ್ಲಿ ಹಾಗೂ ರಾಜಕೀಯ ರಂಗದಲ್ಲಿ ಸಾಕಷ್ಟು ಪ್ರತಿಷ್ಠೆಯನ್ನು ಗಳಿಸಿತ್ತು. ಗವಾನನ ಕಕ್ಕ ಅಮೀರ ಶಮಶುದ್ಧೀನ ಗಿಲನ ಬಾದಶಹನ ದರ್ಬಾರಿನಲ್ಲಿ ಮಂತ್ರಿಯಾಗಿದ್ದ ಗವಾನನ ಶಿಕ್ಷಣ ಅವನ ಕಕ್ಕನ ನೇತೃತ್ವದಲ್ಲಿಯೇ ಸಾಗಿತ್ತು. ಬಾಲ್ಯದಲ್ಲೆ ಗವಾನ ಒಳ್ಳೇ ಮೇಧಾವಿಯಾಗಿದ್ದ, ಗವಾನನಲ್ಲಿ ವ್ಯಾಪಾರದ ಅಭಿರುಚಿಯೂ ಇತ್ತು. ಆ ಕಾರಣದಿಂದ ಬೇರೆ ಬೇರೆ ದೇಶಗಳಿಗೆ ಹೋಗುತ್ತಿದ್ದ.

ಅಲ್ಲದೆ ಅಲ್ಲಿಯ ಮೇಧಾವಿ ಹಾಗೂ ಧಾರ್ಮಿಕ ಜನರೊಡನೆ ತನ್ನ ಸಂಪರ್ಕ ಬೆಳೆಸುತ್ತಿದ್ದ ಗಿಲನ ಪ್ರಾಂತದಲ್ಲಿ ಕೆಲ ದಿನಗಳ ನಂತರ ರಾಜಕೀಯ ಸ್ವರೂಪದ ಅಂತ: ಕಲಹ ಪ್ರಾರಂಭವಾಯಿತು. ಆ ಕಾರಣದಿಂದ ಗವಾನ ಆತನ ಕಕ್ಕ ಅಮೀರ ಶಮಶುದ್ಧೀನ ತನ್ನ ಮಂತ್ರಿ ಪದವಿ ತ್ಯಜಿಸಿದ ಅಲ್ಲದೆ ಮನಶಾಂತಿಗಾಗಿ ಮಕ್ಕಾಯಾತ್ರೆ ಕೈಕೊಂಡರು. ಆಗ ಬೀದರ ಜಿಲ್ಲೆಯಲ್ಲಿ ಮಹಾನ್ ಮುಸ್ಲಿಂ ಸಂತ ಇರುವುದನ್ನು ಗವಾನನಿಗೆ ತಿಳಿಯಿತ್ತು. ಇದರಿಂದ ವ್ಯಾಪಾರದಲ್ಲಿ ಉದ್ದೇಶವನ್ನಿರಿಸಿಕೊಂಡ ಗವಾನ ಪ್ರಥಮ ದಕ್ಷಿಣ ಭಾರತಕ್ಕೆ ಬಂದ ಗವಾನನು ಬೀದರಕ್ಕೆ ಬಂದ ಕಾಲ ಕ್ರಿ.ಶ. 1445 ಆಗ ಸುಮಾರು ಅವನಿಗೆ 45 ವರ್ಷ ವಯಸ್ಸು.

ಮಹಮ್ಮದ ಗವಾನ ಬೀದರಿನ ರಾಜಕೀಯ ರಂಗದಲ್ಲಿ ಪ್ರವೇಶ ಮಾಡಿದ್ದು ಒಂದು ಆಕಸ್ಮಿಕ ಘಟನೆಯೆಂದೇ ಹೇಳಬೇಕು. ಗವಾನ ಎರಡನೇ ಅಲ್ಲಾವುದ್ದೀನ ದರ್ಬಾರನ್ನು ಸಂದರ್ಶಿಸಿದ ಬಹುಮನಿ ರಾಜ್ಯದ ದೊರೆ ಗವಾನನ ಬಗೆಗೆ ಸಾಕಷ್ಟು ಕೇಳಿ ತಿಳಿದುಕೊಂಡಿದ್ದ ಅಲ್ಲದೆ ಗವಾನನ ನಿಷ್ಠೆ ಶ್ರದ್ಧೆ

ಪ್ರಮಾಣಿಕತನ ದೊರೆಯ ಮನಸ್ಸನು ಸೂರೆಗೊಂಡವು ಬಹಮನಿ ದೊರೆ ಗವಾನನಿಗೆ ತನ್ನ ದರ್ಬಾರಿನಲ್ಲಿ ಒಂದು ಸ್ಥಾನ ನೀಡಿದ ಗವಾನನಿಗೆ ಅಧಿಕಾರದ ಆಶೆ ಇರಲಿಲ್ಲ. ಆದರೆ ದೊರೆಯ ಗೌರವ ಪ್ರೀತಿಯನ್ನು ಧಿಕ್ಕರಿಸಿ ಹೋಗುವುದು ಆಗಲಿಲ್ಲ. ಗವಾನ ತನ್ನ ಜೀವ ಮಾನವನ್ನೇ ಬಹಮನಿ ಅರಸರ ಉತ್ಕರ್ಷಕ್ಕೆ ಮುಡಿಪಾಗಿಟ್ಟು ಸೇವೆ ಸಲ್ಲಿಸಿದ.

ಬಹಮನಿ ರಾಜ್ಯದ ದೊರೆ 2ನೇ ಅಲ್ಲಾ ಉದ್ದೀನನ ಮರಣದ ನಂತರ ಆತನ ಮಗ ಹುಮಾಯೂನ ಬಹಮನಿ ರಾಜ್ಯದ ಅರಸನಾಗಿ ಪಟ್ಟಕ್ಕೆ ಬಂದ. ಹುಮಾಯೂನ ಅತ್ಯಂತ ಕ್ರೂರ ಹಾಗೂ ವಿಷಯ ಲಂಪಟನಾಗಿದ್ದ ಇಂಥ ದೊರೆಯ ಸಹವಾಸದಲ್ಲಿಯೂ ಸಹ ಗವಾನ ಅತ್ಯಂತ ಪ್ರೀತಿಯ ಹಾಗೂ ನಿಷ್ಠವಂತ ಸೇವಕನಾಗಿ ಮೆರೆದ ಮಹಮದ ಗವಾನ ಹುಮಾಯೂನ ದರ್ಬಾರಿನಲ್ಲಿ ವ್ಯಾಪಾರಿಗಳ ರಾಜ ಎಂಬ ಗೌರವ ಬಿರುದನ್ನು ಗಳಿಸಿದ ದೊರೆ ಹುಮಾಯೂನ ನಂತರ ನಿಝಾಮ ಶಹನು ಪಟ್ಟಕ್ಕೆ ಬಂದ. ನಿಝಾಮ ಶಹನಿಗೆ ಆಗ ಕೇವಲ 7 ವರ್ಷ ಆದ್ದರಿಂದ ರಾಜ್ಯದ ಎಲ್ಲ ಕಾರ್ಯಭಾರ ಗವಾನದ ಮೇಲೆ ಬಿದ್ದಿತ್ತು. ಏಕೆಂದರೆ ಗವಾನ ಆಗಲೆ ಅತ್ಯಂತ ವಿಶ್ವಾಸದ ವ್ಯಕ್ತಿ ಆಗಿದ್ದ.

ರಾಜಕುಮಾರ ನಿಝಾಮ ಶಹನ ತಾಯಿ ರಾಣಿ ಮಕದುಮ ಜಹಾನ ಗವಾನನನ್ನು ತನ್ನ ಸೋದರನಂತೆಯೇ ಭಾವಿಸಿ ಆದರಿಸಿದಳು ಇದೆ ವೇಳೆಗೆ ಬಹಮನಿ ರಾಜ್ಯದ ರಾಜಕೀಯ ರಂಗದಲ್ಲಿ ಇನ್ನೊಬ್ಬ ವ್ಯಕ್ತಿ ಬೆಳಕಿಗೆ ಬಂದ. ಆತನೆ ತುರ್ಕ ಜಹಾ, ರಾಣಿ ಮಕದುಮ ಜಹಾನ, ಮಹಮದಗವಾನ ಹಾಗೂ ತುರ್ಕ ಜಹಾ, ಈ ಮೂವರು ರಾಜ್ಯದ ಆಡಳಿತದ ಕಾರ್ಯದಲ್ಲಿ ಪ್ರತಿಷ್ಠಿತ ವ್ಯಕ್ತಿಗಳಾಗಿದ್ದರು. ದುರ್ದೈವದಿಂದ ರಾಜಕುಮಾರ ನಿಝಾಮ ಶಹ ಎಳೆ ವಯಸ್ಸಿನಲ್ಲಿಯೇ ತೀರಿಕೊಂಡ ಅವನ ತರುವಾಯ 3ನೇ ಮಹ್ಮದ ಶಹನು ಪಟ್ಟಕ್ಕೆ ಬಂದ ಅವನೂ ಕೂಡ 9 ವರ್ಷದ ಎಳೆಯ ರಾಜಕುಮಾರ ತಾಯಿ ಮಗ ಗವಾನ ತುರ್ಕ ಜಹಾ ಇವರಿಂದ ರಾಜ್ಯದ ಆಗು ಹೋಗುಗಳನ್ನು ನೆರೆವೇರಿಸುತ್ತಿದ್ದಳು. ಗವಾನನು ತರುಣ ದೊರೆಗೆ ಎಲ್ಲ ಬಗೆಯ ಜ್ಞಾನವನ್ನು ನೀಡಿದ ಆಡಳಿತ ಸೂತ್ರದ ವಿವರಗಳನ್ನು ವಿವರಿಸಿದ ಅವನನ್ನು ಪ್ರಮಾಣಿಕನಾಗಿ ನೋಡಿಕೊಂಡ.

ಇದೆ ಸಮಯದಲ್ಲಿ ಒಂದು ಅಸಂತೋಷದ ಘಟನೆ ನಡೆಯಿತು. ತುರ್ಕಜಹಾ ಗವಾನನ ಪ್ರತಿಷ್ಠೆಯನ್ನು ಸಹಿಸದಾದ. ಹೇಗಾದರು ಮಾಡಿ ಗವಾನನ್ನು ರಾಜಧಾನಿಯಿಂದ ಓಡಿಸಬೇಕೆಂಬುದೇ ಅವನ ಉದ್ದೇಶವಾಗಿತ್ತು. ಜಹಾ ತುರ್ಕನ ಈ ಕುಹಕ ಯೋಜನೆ ರಾಣಿ ಮಕದುಮ ಜಹನಳಿಗೆ ತಿಳಿದು ಹೋಯಿತು. ರಾಣಿ ಬೇಕಂತಲೆ ಹಣದ ದುರುಪಯೋಗದ ಆರೋಪ ಹೋರಿಸಿ ಅವನನ್ನು ದರ್ಬಾರಿನಲ್ಲಿಯೇ ಕೊಲೆ ಮಾಡಿಸಿದಳು. ಆದರೆ ಗವಾನನಿಗೆ ಇದರ ಬಗ್ಗೆ ಏನು ಗೊತ್ತಿರಲಿಲ್ಲ. ಜಹಾ ತುರ್ಕನ ಕೋಲೆಯ ನಂತರ ಗವಾನ ಏಕೈಕ ಆಡಳಿತಗಾರನಾಗಿ ಬೆಳಕಿಗೆ ಬಂದ.

ಗವಾನ ರಾಜಕೀಯ ರಂಗದಲ್ಲಿಯಂತೆ ಸೈನಿಕ ರಂಗದಲ್ಲಿಯೂ ಕೂಡ ಮಹತ್ವದ ಪಾತ್ರ ವಹಿಸಿದನು. ಬಹಮನಿ ರಾಜ್ಯದ ವಿಸ್ತಾರಕ್ಕೆ ಸೈನಿಕ ಕೀರ್ತಿಗೆ ಗವಾನನೆ ಮೂಲ ಕಾರಣನೆಂದರೂ ನಡೆದಿತು. ಗವಾನನ ನೇತೃತ್ವದಲ್ಲಿ ಬಹಮನಿ ರಾಜ್ಯ ಮೊದಲಿಗಿಂತಲೂ ವಿಸ್ತಾರವಾಗಿ ಹಬ್ಬಿತ್ತು. ಗವಾನ ಆಡಳಿತ ರಂಗದಲ್ಲಿಯೂ ಅದ್ವಿತಿಯ ವ್ಯಕ್ತಿಯಾಗಿ ಮೆರೆದ.

## ಮಹಮ್ಮದಗವಾನ ವಿದ್ಯಾಲಯ

ಮಹಮ್ಮದ ಗವಾನ ಶಿಕ್ಷಣ ರಂಗದಲ್ಲಿಯೂ ಸಹ ಪ್ರತಿಭಾ ಸಂಪನ್ನನಾಗಿದ್ದ ಆತನ ಶಿಕ್ಷಣ ಪ್ರೇಮದ ಸಂಕೇತವಾಗಿ ಬೀದರಿನಲ್ಲಿ ಆತನೇ ಕಟ್ಟಿಸಿದ ವಿದ್ಯಾಲಯ ಇಂದಿಗೂ ಜೀವಂತ ಸಾಕ್ಷಿಯಾಗಿ ನಿಂತಿದೆ. ಮಹಮ್ಮದ ಗವಾನನ ವಿದ್ಯಾಲಯ ಅವನ ಬದುಕಿನ ಹೆಮ್ಮೆಯ ಸಾಧನೆಯೆಂದೆ ಹೇಳಬೇಕು. ಅದೂ ಅಲ್ಲದೆ ಈ ವಿದ್ಯಾಲಯ ಬಹಮನಿ ರಾಜ್ಯದ ಕಟ್ಟಡಗಳಲ್ಲಿಯೇ ಅನುಪಮವಾದದ್ದೆಂದು ಹೇಳಬಹುದು. ಅನೇಕ ವಿದೇಶಿ ಲೇಖಕರು ಗವಾನನ ವಿದ್ಯಾಲಯವನ್ನು ಸಂದರ್ಶಿಸಿ ಬಾಯ್ತುಂಬ ಹೊಗಳಿದ್ದಾರೆ. ದಕ್ಷಿಣ ಭಾರತದಲ್ಲಿಯೇ ಇಂಥ ಇನ್ನೊಂದು ಕಟ್ಟಡ ಇರಲಿಲ್ಲವೆಂದರೆ ಅತಿಶಯೋಕ್ತಿ ಆಗಲಿಕ್ಕಿಲ್ಲ.

ಸರ್‌ರಿಚರ್ಡ ಟೆಂಪಲ್ ಈ ವಿದ್ಯಾಲಯದ ಬಗೆಗೆ ಹೀಗೆ ಉದ್ಗರಿಸಿದ್ದಾರೆ.

"Among the old building of India the school building is of its type and very beautiful" ಅಲ್ಲದೆ ಈ ಕೆಳಗಿನ ವಾಕ್ಯದಲ್ಲಿ ಗವಾನನ ವಿದ್ಯಾಲಯದ ಘನತೆಯನ್ನು ನಾವು ಕಾಣಬಹುದಾಗಿದೆ.

"This exaited school with a high basement, has been built as the place of adoration for the pure minded. Look at the signs of its divine acceptance. That its chronogram in the quranic verse "Our Lord accept it from us"

ಬೀದರ ಪಟ್ಟಣದ ಮದ್ಯದಲ್ಲಿರುವ ಅಪರೂಪದ ಕಟ್ಟಡ ಮದರಸಾ ವಿದ್ಯಾಲಯ ಕ್ರಿ.ಶ. 1472 ರಲ್ಲಿ ಈ ವಿದ್ಯಾಲಯ ನಿರ್ಮಾಣವಾಯಿತು. ಈ ಕಟ್ಟಡ ಕಟ್ಟಲು ಮಹಮ್ಮದ ಗವಾನ ಪರ್ಶಿಯಾ ಹಾಗೂ ಇನ್ನಿತರ ದೇಶಗಳಿಂದ ಶಿಲ್ಪಿಕಾಲಾಕಾರರನ್ನು ಹಾಗೂ ತಾಂತ್ರಿಕ ತಜ್ಞರನ್ನು ಕುಶಲ ಕರ್ಮಿಗಳನ್ನು ಕರೆಸಿ ಕಟ್ಟಡವನ್ನು ಕಟ್ಟಿಸಿದ ಕುರುಹು ಅಲ್ಲಿ ತೋರುತ್ತದೆ. ಈ ಸಂಗತಿಯನ್ನು ಪುಷ್ಟೀಕರಿಸಲು ಐತಿಹಾಸಿಕ

ದಾಖಲೆಗಳು ಬೆಂಬಲವೂ ದೊರೆಯುತ್ತದೆ. ಪಶ್ಚಿಮ ಆಫ್ರಿಕಾ, ರಾಬಾತ, ಸಮರಕಂದ ಹಾಗೂ ಖೋರಾಸಾಗಳಲ್ಲಿ ಕಟ್ಟಿಸಿದ ವಿದ್ಯಾಲಯಗಳು ಇದೆ ಮಾದರಿಯಿಲ್ಲ ನಿರ್ಮಾಣವಾಗಿವೆ ಎಂದು ಅನೇಕ ಲೇಖಕರು ಅಭಿಪ್ರಾಯಪಟ್ಟಿದ್ದಾರೆ. ಮುಸ್ಲಿಮ್ ಇತಿಹಾಸಕಾರ ಫಿರಿಸ್ತನೂ ಸಹ ಮೇಲಿನ ಅಭಿಪ್ರಾಯವನ್ನು ಒಪ್ಪಿಕೊಂಡಿದ್ದಾನೆ. ಫಿರಿಸ್ತಾನ ಪ್ರಕಾರ ಮಹ್ಮದ ಗವಾನ ಜಗತ್ತಿನ ಈ ಕಾಲದ ವಿದ್ಯಾಲಯಗಳೊಡನೆ ಹಾಗೂ ಪ್ರಸಿದ್ಧ ಮೇಧಾವಿಗಳೊಡನೆ ತನ್ನ ಸಂಪರ್ಕವನ್ನಿರಿಸಿಕೊಂಡಿದ್ದ. ಅದೂ ಅಲ್ಲದೆ ಜಗತ್ತಿನ ಪ್ರಸಿದ್ಧ ವಿದ್ಯಾಲಯಗಳ ಮಾದರಿಯಲ್ಲೆ ಬೀದರನಲ್ಲಿ ವಿದ್ಯಾಲಯವನ್ನು ನಿರ್ಮಾಣ ಮಾಡಿದ.

ಗವಾನನ ವಿದ್ಯಾಲಯವೆಂದರೆ ಮಹಾ ಮೇಧಾವಿಗಳ ಹಾಗೂ ವಿಜ್ಞಾನಿಗಳ ಸಂಗಮ ತತ್ವಶಾಸ್ತ್ರ ಗಣಿತಶಾಸ್ತ್ರ ವಿಜ್ಞಾನ ಮುಂತಾದವುಗಳ ಮೇಧಾವಿಗಳು ಇಲ್ಲಿ ಸಮಾವೇಶಗೊಂಡಿದ್ದರು. ಗವಾನನೂ ಸಹ ತನ್ನ ವಿಶ್ರಾಂತಿಯ ಹಾಗೂ ಬಿಡುವಿನ ವೇಳೆಯಲ್ಲಿ ಇಲ್ಲಿಯೇ ಕಳೆಯುತ್ತಿದ್ದ. ಮಹಮ್ಮದ ಗವಾನ ಸ್ವತ: ಗಣಿತ ಹಾಗೂ ತತ್ವಶಾಸ್ತ್ರಗಳಲ್ಲಿ ಮೇಧಾವಿಯಾಗಿದ್ದ ಈ ವಿದ್ಯಾಲಯದಲ್ಲಿ ಸುಮಾರು 3000 ಕೈ ಬರಹದ ಪ್ರತಿಗಳಿದ್ದವೆಂದು ನಂಬಲಾಗಿದೆ. ಆದರೆ ಕಾಲಚಕ್ರದ ವಶಕ್ಕೆ ಸಿಲುಕಿ ಅವೆಲ್ಲ ಈಗ ನಾಶವಾಗಿರಬಹುದು. ಉಳಿದಿದ್ದರೂ ಓದಲು ಭಾರದಷ್ಟು ನಾಶವಾಗಿವೆ.

ಗವಾನನ ವಿಶ್ವವಿದ್ಯಾಲಯದ ಮುಖ್ಯ ಅಂಶವೆಂದರೆ ಇಲ್ಲಿ ವಿದ್ಯಾರ್ಥಿಗಳಿಗೆ ಪುಕ್ಕಟೆ ವಸತಿ ಊಟ ವಿದ್ಯೆ ಹಾಗೂ ಉಳಿದ ಸೌಕರ್ಯಗಳನ್ನು ಒದಗಿಸಲಾಗುತ್ತಿತ್ತು. ವಿದ್ಯಾರ್ಥಿಗಳು ಯಾವ ಬಗೆಯ ಶಿಕ್ಷಣ ಶುಲ್ಕವನ್ನು ಕೊಡುತ್ತಿರಲಿಲ್ಲ. ಅಂತೆಯೇ ಮಹಮ್ಮದ ಗವಾನನ ಈ ವಿದ್ಯಾಲಯ ಆದರ್ಶ ಶಿಕ್ಷಣ ಸಂಸ್ಥೆಯಾಗಿ ಪ್ರಸಿದ್ಧಿ ಪಡೆದಿತ್ತು.

ಇನ್ನೊಂದು ಅಂಶವೆಂದರೆ ಈ ವಿದ್ಯಾಲಯದಲ್ಲಿ ಪ್ರಾಧ್ಯಪಕರೂ ಸಹ ಇರುತ್ತಿದ್ದರು. ಅವರಿಗೆ ವಸತಿ ಹಾಗೂ ಊಟದ್ದ ಸೌಕರ್ಯಗಳನ್ನು ಒದಗಿಸಲಾಗಿತ್ತು. ಇದಲ್ಲದೆ ಇಲ್ಲಿ ಧಾರ್ಮಿಕ ವ್ಯಕ್ತಿಗಳೂ ಹಾಗೂ ಸಾಧು-ಸತ್ಪುರಷರೂ ಇದ್ದರು ಹಾಗೂ ವಿದ್ಯಾರ್ಥಿಗಳಿಗೆ ಬೇಕಾಗುವ ವಸತಿ ಸೌಕರ್ಯಗಳನ್ನು ಬೇರೆ ಬೇರೆಯಾಗಿ ಮಾಡಲಾಗಿತ್ತು. ಇಂಥ ವ್ಯವಸ್ಥೆಯನ್ನು ನಾವು ಈಗಲೂ ಅಳಿದುಳಿದ ಗವಾನ ವಿದ್ಯಾಲಯದಲ್ಲಿ ನೋಡಬಹುದಾಗಿದೆ. ಇದೇ ವಿದ್ಯಾಲಯದಲ್ಲಿ ಒಂದು ಮಜೀದಿ ಇದು ಈಗಲೂ ಇದೆ. ಹಾಗೂ ಒಂದು ದೊಡ್ಡ ಗ್ರಾಂಥಾಲಯ ಇದ್ದಿತ್ತು ಎಂದು ನಂಬಲಾಗಿದೆ. ಆದರೆ ಗ್ರಂಥಲಾಯದ ಕುರುಹು ಉಳಿದಿಲ್ಲ.

ಇನ್ನು ವಿದ್ಯಾಲಯದ ಕಟ್ಟಡ ಹಾಗೂ ಕಲಾ ಕುಶಲತೆಯ ಬಗೆಗೆ ಹೇಳುವುದಾದ್ದರೆ ಗವಾನನ ವಿದ್ಯಾಲಯ ಸವಿಸ್ತಾರವಾದ ಹಾಗೂ ಗಟ್ಟಿ ಮುಟ್ಟಾದ ತಳಪಾಯದ ಮೇಲೆ ಸುಂದರವಾಗಿ ಕಟ್ಟಲ್ಪಟ್ಟಿದೆ. ಮೂರು ಅಂತಸ್ತುಗಳಲ್ಲಿ ಈ ವಿದ್ಯಾಲಯ ನಿರ್ಮಾಣವಾಗಿದೆ. ಈ ಕಟ್ಟಡಕ್ಕೆ ಎರಡು ಎತ್ತರದ ಸ್ತಂಭಗಳಿದ್ದವೆಂದು ಐತಿಹಾಸಿಕ ದಾಖಲೆ ಇದೆ. ಆದರೆ ಈಗ ಸದ್ಯಕ್ಕೆ ಕಾಣಸಿಗುವ ಒಂದೆ ಸ್ತಂಭ

ವಿದ್ಯಾಲಯದ ಹೊರಗಿನ ಗೋಡೆಯ ಪೂರ್ವ ಪಶ್ಚಿಮವಾಗಿ 241 ಗಳವರೆಗೆ ಉದ್ದವಾಗಿದೆ. ಉತ್ತರ ದಕ್ಷಣವಾಗಿ 220 ಗಳ ವರೆಗೆ ಅಗಲವಾಗಿದೆ. ಮುಗಿಲನ್ನೇ ಚುಂಬಿಸುವಂತಿರುವ ಈ ವಿದ್ಯಾಲಯ ಸ್ತಂಭ ತಳಪಾಯದಿಂದ 131 ಎತ್ತರವಾಗಿದೆ. ಒಳಗಿನ ಆವರಣ ಪೂರ್ವ ಪಶ್ಚಿಮವಾಗಿ 75 ಗಳ ವರೆಗೆ ಉದ್ದವಾಗಿದೆ. ಹಾಗೂ ಎತ್ತರ ದಕ್ಷಿಣವಾಗಿ 55 ಗಳ ವರೆಗೆ ಅಗಲವಾಗಿದೆ. ಆವರಣದ ಎತ್ತರ 45 ವಿಶಾಲವಾದ ಪ್ರಾಂಗಣದಲ್ಲಿದೆ ಪ್ರಾಥನ ಮಂದಿರ ಪುಸ್ತಕ ಭಂಡಾರ ಪ್ರಾಧ್ಯಾಪಕರ ಕೊಠಡಿ ವಿದ್ಯಾರ್ಥಿಗಳ ಕೋಣೆ ಸುತ್ತಲು ತರಗತಿಯ ಕೊಠಡಿಗಳಿದು ಮಧ್ಯದಲ್ಲಿ ಪ್ರಾಂಗಣವಿದು ಆ ಕಾಲದ ಕಟ್ಟಡ ರಚನೆಯ ವಿನ್ಯಾಸವನ್ನು ಸೌಂದರ್ಯ ಪ್ರಜ್ಞೆಯನ್ನು ಮೈಬಿಚ್ಚಿ ತೋರಿಸುತ್ತದೆ. ಈ ವಿದ್ಯಾಲಯದ ಕಲಾಕುಶಲತೆಯ ಬಗ್ಗೆ ಹೇಳಬೇಕಾದರೆ ಗವಾನ ವಿದ್ಯಾಲಯ ನಿಜವಾಗಿಯೂ ನಯನ ಮನೋಹರವಾಗಿದೆ. ವಿದ್ಯಾಲಯದ ಮುಂಭಾಗದ ಗೋಡೆಯ ಮೇಲೆಲ್ಲ ಚೀನಿ ಮಣ್ಣಿನ ಪ್ಲೇಟಿನಲ್ಲಿ ಕೆತ್ತಲಾದ ಕಲಾಕುಸುರಿನ ಆಕೃತಿಗಳು ಈ ವಿದ್ಯಾಲದ ಸೌಂದರ್ಯವನ್ನು ಇನ್ನಿಷ್ಟು ಹೆಚ್ಚಿಸಿವೆ. ವಿದ್ಯಾಲಯದ ಎತ್ತರವಾದ ಸ್ತಂಭದ ಮೇಲೆಯೂ ಸಹ ಬಣ್ಣ ಬಣ್ಣದ ಕಲಾಕುಸುರಿನ ಆಕೃತಿಗಳು ಕೆತ್ತಲಟ್ಟಿವೆ. ಆ ಬಣ್ಣ ಕೆಲೆ ಗಾಳಿ, ಮಳೆಗಳ ಆಘಾತಗಳನ್ನುಲೆಕ್ಕಿಸದೆ ಇಂದಿಗೂ ಇದೆ. ತಿಳಿ ಹಸಿರು ಹಳದಿ ಹಾಗೂ ಬಿಳಿ ಬಣ್ಣಗಳಲ್ಲಿ ಕಲಾ ಕೃತಿಗಳನ್ನು ಕೆತ್ತಿದ್ದಾರೆ ಸುಮಾರು 500 ವರುಷಗಳು ಆಗುತ್ತ ಬಂದಿದ್ದರೂ ಈ ವಿದ್ಯಾಲಯದ ಕಲೆಯ ಚೆಲುವು ಮಾತ್ರ ಇನ್ನೂ ಕುಂದಿ ಹೋಗಿಲ್ಲ.

ಪವಿತ್ರ ಕುರಾನದಿಂದ ಆಯ್ದುಕೊಂಡ ಕೆಲ ಉಕ್ತಿಗಳೂ ವಿದ್ಯಾಲಯದ ಗೋಡೆಯ ಮೇಲೆ ಇಂದಿಗೂ ಇವೆ. ಈ ವಿದ್ಯಾಲಯವನ್ನು ಗವಾನ ತನ್ನ ಸ್ವಂತ ಆದಾಯದಲ್ಲಿ ಉಳಿದ ಹಣದಿಂದ ಕಟ್ಟಿಸಿದ, ಗವಾನ ವಿದ್ಯಾಲಯ ಕಟ್ಟಿಸಿ ನಿರ್ವಹಿಸಿಕೊಂಡು ಬಂದನಲ್ಲದೆ. ತಾನು ಬೀದರನಲ್ಲಿದ್ದಾಗ ಹೆಚ್ಚು ಕಡಿಮೆ ಪ್ರತಿದಿನವೂ ಈ ವಿದ್ಯಾಲದಯಲ್ಲಿ ಬಂದು ಅಲ್ಲಿ ಅಭ್ಯಸಿಸುತ್ತಿದ್ದನು. ಹಾಗೂ ಅನೇಕ ವಿದ್ವಾಂಸರೊಂದಿಗೆ ಚರ್ಚೆಮಾಡುತ್ತಿದದನು ಗವಾನ ತನ್ನ ಬಿಡುವಿನಲ್ಲಿ ಈ ವಿದ್ಯಾಲಯದಲ್ಲಿ ವಿದ್ವಾಂಸರೊಂದಿಗೆ ಕಳೆಯುತ್ತಿದೆ.

ಈ ಬೀದರ ಮದರಸಾ, ವಿದ್ಯಾಲಯ ಆ ಸಮಯದಲ್ಲಿ ವಿದೇಶಿಯರನ್ನು ಆಕರ್ಷಿಸಿತ್ತು ಮಧ್ಯ ಏಷ್ಯಾದಿಂದ ಶಿಕ್ಷಕರು ಹಾಗೂ ವಿದ್ಯಾರ್ಥಿಗಳನ್ನು ಆಕರ್ಷಿಸಿತ್ತು ಕ್ರಿ.ಶ. 1469-74ರ ಅವಧಿಯಲ್ಲಿ ಮಧ್ಯ ರಷ್ಯದ ಪ್ರವಾಸಿ ಆಥೇನೆ ಸಿಯಸ್‌ನನ್ನು ಆಕರ್ಷಿಸಿತ್ತು. ಮತ್ತು ಇರಾನ ಇರಾಕ ದೇಶಗಳಿಂದ ಅಲ್ಲದೆ ಪ್ರಪಂಚದ ಇತರ ಭಾಗಗಳಿಂದ ದೊಡ್ಡ ದೊಡ್ಡ ವಿದ್ವಾಂಸರನ್ನು ಈ ವಿದ್ಯಾಲಯ ಆಕರ್ಷಿಸಿತ್ತು. ಈ ಮದರಸಾ ವಿದ್ಯಾಲಯದಲ್ಲಿ ಆರೇಬಿಕ ಪಾರ್ಸಿ ಭಾಷೆಯನ್ನು ಕಲಿಯಲು ಪ್ರಪಂಚದಿಂದ ಅನೇಕ ಕಡೆಯಿಂದ ಅನೇಕ ಶಿಕ್ಷಕರು ವಿದ್ಯಾರ್ಥಿಗಳು ಈ ಬೀದರ ಜಿಲ್ಲೆಗೆ ಬರುತ್ತಿದ್ದರು.

ಈ ವಿದ್ಯಾಲಯದ ವಾಸ್ತು ಶಿಲ್ಪ ಭಾರತದ ವಿದ್ಯಾಲಯದ ಕಟ್ಟಡದ ಬಹುಶ: ಏಕೈಕವಾದದ್ದಾಗಿದೆ. ಪಶ್ಚಿಮ ಏಷ್ಯಾದಲ್ಲಿ ಪ್ರಸಿದ್ಧವಾಗಿದ್ದ ಇಸ್ಲಾಮಿಕ ಕಲೆಯನ್ನು ಇಲ್ಲಿ ರೂಢಿಗೆ ತಂದರು.

ದುರ್ದೈವದಿಂದ ಗವಾನ ವಿದ್ಯಾಲಯ ಕ್ರಿ.ಶ. 1669 ರಲ್ಲಿ ಸಿಡಿಲಿನ ಅಪಘಾತಕ್ಕೆ ಸಿಲುಕಿ ಅದರ ಅರ್ಧ ಭಾಗ ನೆಲಸಮವಾಗಿದೆ. ಒಂದು ಎತ್ತರವಾದ ಸ್ತಂಭವೂ ಕಣ್ಮರೆಯಾಗಿದೆ.ಇನ್ನರ್ಧ ಭಾಗ ಇನ್ನೂ ಭವ್ಯವಾಗಿಯೆ ಇದೆ. ನಮಗೆ ಅದರ ಐತಿಹಾಸಿಕ ಶ್ರೀಮಂತಿಕೆಯನ್ನು ಹಾಗೂ ಗವಾನನ ಶಿಕ್ಷಣ ಪ್ರೇಮವನ್ನು ಸೂಚಿಸುತ್ತದೆ. ಬಹಮನಿಯ ರಾಜ್ಯದ ಹೆಮ್ಮೆಯ ಸಂಕೇತವಾಗಿಯೂ ನಿಂತಿದೆ. ಉಳಿದ ಒಂದೆ ಸ್ತಂಭ 39.96 ಮಿ. ಎತ್ತರದ ಮಿನಾರನು ಒಳಗೊಂಡಿರುವ ಈ ಕಟ್ಟಡದ ಗೋಡೆಗಳ ಮೇಲೆ ಕುರಾನನಿಂದ ಆಯ್ದ ಸಾಲುಗಳನ್ನು ಬಣ್ಣದ ಟೈಲ್ಸಗಳಿಂದ ಮಿಂಚುತ್ತಿದ್ದ ಈ ಕಟ್ಟಡವನ್ನು ಸಾಮಾನ್ಯ ಜನರು ಗಾಜಿನ ಕಂಬ ಎಂದು ಕರೆಯುತ್ತಿದ್ದರು. ಈಗಲೂ ಈ ಹೆಸರು ಮುಂದುವರೆದುಕೊಂಡೆ ಇದೆ.

## ಆಧಾರ ಗ್ರಂಥಗಳು


1. ಮಹಮ್ಮದ ಗಾವನ - ಎಲ್.ಆರ್. ಕುಲಕರ್ಣಿ
2. ಬೀದರ ಉತ್ಸವ ಸ್ಮರಣ ಸಂಚಿಕೆ 2006 - ಪ್ರೊ. ಬಿ.ಆರ್. ಕೊಂಡ ಬೀದರ.
3. ಬೀದರ ಉತ್ಸವ ಸ್ಮರಣ ಸಂಚಿಕೆ 2006 - ದೇವು ಪತ್ತಾರ. ವರದಿಗಾರರು ಪ್ರಜಾವಾಣಿ ಬೀದರ.

# ಬಸವ ಕಲ್ಯಾಣದ ಕೋಟೆ

ಬೀದರ ನಗರದಿಂದ ಸುಮಾರು 80 ಕಿ.ಮೀ. ದೂರದ ಮೇಲೆ ಹಿಂದಿನ ಐತಿಹಾಸಿಕ ಅವಶೇಷಗಳನ್ನು ಹೊತ್ತು ಇಂದಿಗೂ ತಲೆ ಎತ್ತಿ ನಿಂತ ಅ ಸಂಖ್ಯಾತ ಪ್ರವಾಸಿಗರನ್ನು ಬರಮಾಡಿಕೊಳ್ಳುವ ಸುಂದರವಾದ ಪಟ್ಟಣ ಇದಾಗಿದೆ. ಜಿಲ್ಲೆಯ ಐದು ತಾಲೂಕಾಗಳಲ್ಲಿ ಇದು ಒಂದು. 10ನೇ ಶತಮಾನದ ಉತ್ತರಾರ್ಧದಲ್ಲಿ ಚಾಲುಕ್ಯರು ಮಾನ್ಯಖೇಟದಿಂಧ ಇಲ್ಲಿಗೆ ತಮ್ಮ ರಾಜ್ಯಧಾನಿಯನ್ನು ವರ್ಗಾಯಿಸಿದ ನಂತರವೇ ಇದಕ್ಕೆ ಐತಿಹಾಸಿಕ ಪ್ರಾಮುಖ್ಯತೆ ಬಂದದ್ದು, ಅಂದು ಇದು ಸಂಪದ್ಭರಿತವಾದ ನಡಾಗಿ ವೈಭವದಿಂದ ಮೆರೆದಿತ್ತು.

ಬಸವಕಲ್ಯಾಣದ ಉತ್ತರ ದಿಕ್ಕಿನಲ್ಲಿರುವ ಈ ಕೋಟೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿದೆ. ಕರಿ ಕಲ್ಲಿನಲ್ಲಿ ಕಟ್ಟಲಾಗಿರುವ ಇದು ಕಲ್ಲು ಬಂಡೆಯ ಮೇಲೆ ನಿಂತಿದ್ದು ದುರ್ಗಮಯವಾಗಿದೆ. ಸುಮಾರು 12 ಅಡಿಗಿಂತಲೂ ಎತ್ತರವಾಗಿರುವ ಈ ಕೋಟೆಯ ಸುತ್ತಲು ಆಳವಾದ ಕಂದಕವಿದೆ. ಕೋಟೆಯ ಕೆಲವು ಭಾಗವು ಇನ್ನೂ ಸುರಕ್ಷಿತವಾಗಿದ್ದು, ಕಟ್ಟಡದ ರೀತಿ ಆಶ್ಚರ್ಯ ಮೂಡಿಸುತ್ತದೆ. ದೊಡ್ಡ ದೊಡ್ಡ ಕಲ್ಲುಗಳನ್ನೊಳಗೊಂಡು ರಾಶಿ ಕಲ್ಲುಗಳನ್ನು ಬಳಸಲಾಗಿರುವ ಇದರ ಗೋಡೆಯ ದಪ್ಪವಾಗಿದ್ದು, ಸುರಕ್ಷತೆಯನ್ನು ಗಮನದಲ್ಲಿರಿಸಿಕೊಂಡು ರಚಿಸಿರುವುದನ್ನು ತಿಳಿಸುತ್ತದೆ. ಈ ಕೋಟೆಯೊಳಗೆ ಪುರಾತನ ದ್ವಾರಗಳು, ತೋಪುಗಳು ತೋಪಿನ ಗುಂಡುಗಳೂ ಇವೆ. ಅವುಗಳಲ್ಲಿ ಅತ್ಯಂತ ಭಾರವಾಗಿರುವ 694 ಸೆ.ಮೀ. ಉದ್ದವಿರುವ ನವಗಜ ತೋಪನ್ನು ಎತ್ತರದ ಕಟ್ಟಡದ ಮೇಲೆ ಇರಿಸಿರುವುದು ಗಮನಿಸುವಂತಹದು ಅದನ್ನು ಒಬ್ಬಿಬ್ಬರು ಅತ್ಯಂತ ಸುಲಭವಾಗಿ ತಿರುಗಿಸಬಹುದಾದ ತಂತ್ರಗಾರಿಕೆಯನ್ನು ಅಲ್ಲಿ ಅಳವಡಿಸಿರುವುದು ಅಶ್ಚರ್ಯ ಮೂಡಿಸುತ್ತದೆ.

ಅಲ್ಲಿಯೇ ಸಮೀಪದಲ್ಲಿ ಚಾಲುಕ್ಯರದೆಂದು ಹೇಳುವ ವಿಶಾಲವಾದ ರಾಜ ದರ್ಬಾರ ಇದ್ದು, ಸಿಂಹಾಸನದ ಸ್ಥಾನ ಗೋಚರವಾಗುವುದಿಲ್ಲ. ವಾಸ್ತು ಶೈಲಿಯ ದೃಷ್ಟಿಯಿಂದ ಗಮನಾರ್ಹವಾದ ಇದು ರಚನೆಯಲ್ಲಿ ಸರಳವಾಗಿದೆ. ಒಂದು ಚಿಕ್ಕ ಗುಡಿಯು ರಾಜಮಹಲಿನ ಪಕ್ಕದಲ್ಲಿದ್ದು, ಇದರ ಬಾಗಿಲು ಚೌಕಟ್ಟಿನ ಮೇಲೆ ಗಣಪತಿ ಮೂರ್ತಿ ಇದೆ. ಅಲ್ಲಿಯೇ ಇನ್ನೊಂದು ಕಡೆ ಮಹಮ್ಮದ ಪೈಗಂಬರರ ಮೊಮ್ಮಗ ಹುಸೇನನ ಹೆಸರಿನ ಕಟ್ಟಡವಿದ್ದು ಇದರೊಂದಿಗೆ ಮೋತಿ ಮಹಲ್ ಹೈದರ ಮಹಲಗಳೆಂದು ಹೇಳುವ ಕಟ್ಟಡಗಳೂ ಅಲ್ಲಿವೆ. ಈ ಕೋಟೆ ಚಾಲುಕ್ಯರ ನಂತರದಲ್ಲಿ ಮುಸ್ಲಿಂ ಅರಸರ ಕೈವಶವಾಗಿದ್ದುದರ ಗುರುತುಗಳಿವು. ಕೋಟೆಯ ಹಲವು ಕಡೆಗಳಲ್ಲಿ ಚಾಲುಕ್ಯರ ಕಾಲದ ದೇವಾಲಯಗಳ ಭಗ್ನ ಭಾಗಗಳು ಮೂರ್ತಿಗಳು ಕಾಣ ಸಿಗುತ್ತಿದ್ದು, ಅವುಗಳಲ್ಲಿ ಕೆಲವನ್ನು ಒಂದೆಡೆ ಸೇರಿಸಿ ಇಡಲಾಗಿದೆ. ಈ ಕೋಟೆಯ ಸಮೀಪದ ಮನೆಯೊಂದರಲ್ಲಿ ಒಂದು ಸೂರ್ಯ ವಿಗ್ರಹವಿದ್ದು ಅದು ಈ ಚಾಲುಕ್ಯರ ಸುಂದರ ಶಿಲ್ಪವೆನಿಸುತ್ತದೆ.

ಬಿಜ್ಜಳನದೆಂದು ಹೇಳಲಾಗುವ ಅರಮನೆ ದಿಬ್ಬ 100 ಅಡಿ ಉದ್ದ 70 ಅಡ್ಡಿ ಅಗಲ 10 ಅಡಿ ಎತ್ತರವಾಗಿದ್ದು ಅಲ್ಲಿ ಅರಮನೆಯಿದ್ದ ಕುರುಹುಗಳಿವೆ. ಹಾಗೆಯೇ ನಂತರದ ಕಾಲದ ಕಲ್ಯಾಣ ನವಾಬರುಗಳ ಪೀರಾನ ದರ್ಗಾ ಗೋರಿಗಳು ಮುಸ್ಲಿಂ ಶೈಲಿಯ ವಾಸ್ತುಗಳು ಬಿಜ್ಜಳನ ಕಾಲದ ಶಿವಶರಣರ ವಾಸದ ಮನೆಗಳಾಗಿರುವ ಗುಹೆಗಳು ವಾಸ್ತು ರಚನೆಯಲ್ಲಿ ಹಿಂದಿನ ಗುಹಾಂತರ ದೇವಾಲಯಗಳ ರೀತಿಯವು. ಗಟ್ಟಿಯಾದ ಗುಡ್ಡವನ್ನು ಕೊರೆದು ವಾಸಿಸಲು ಯೋಗ್ಯ ರೀತಿಯಲ್ಲಿ ನಿರ್ಮಿಸಲಾಗಿರುವ ಅವು ಪ್ರವಾಸಿಗರ ಮನ ತಣಿಸುತ್ತವೆ. ಕಲ್ಲಿನಿಂದ ಮಾಡಿದ ಬಾಗಿಲು ಚೌಕಟ್ಟುಗಳು ಬೋಧಿಗೆಗಳು ಕೆಲವು ಗುಹೆಗಳಲ್ಲಿ ಕಂಬ ತೊಲೆಗಳು ನೋಡಲು ಸಿಗುತ್ತವೆ. ಇಂತಹವುಗಳಲ್ಲಿ ಬಸವಣ್ಣನ ಅರುನ ಮನೆ ಅಕ್ಕ ನಾಗಮ್ಮನ ಗವಿ ಪ್ರಭು ದೇವರ ಮಠ ನುಲಿಯ ಚಂದಯ್ಯನ ಗವಿ ಇತ್ಯಾದಿಗಳು ಇವೆ. ಸುತ್ತಮುತ್ತಲಿನ ಹಲವು ಹಳ್ಳಿಗಳಲ್ಲಿ ಇಂಥವುಗಳು ಬೇಕಾದಷ್ಟು ಇವೆ. ಅಲ್ಲಿದೆ ಬಸವಕಲ್ಯಾಣದಲ್ಲಿ ಕಂಬಳಿ ಮಠ ಗಚ್ಚಿನಮಠ ಹುಲಕುಂಠಿ ಮಠದಂತಹ ಪ್ರಾಚೀನ ಕಾಲದ ಕಟ್ಟಡಗಳೂ ಸದಾನಂದ ಸ್ವಾಮಿ ಮಠ. ಬಸವಣನ ಗುಡ್ಡಿ ಇತ್ಯಾದಿ ಹಲವಾರು ಕಾಣಸಿಗುತ್ತವೆ.

12ನೇ ಶತಮಾನದಲ್ಲಿ ಕಲ್ಯಾಣದಲ್ಲಿ ನಡೆದ ಶರಣರ ಕ್ರಾಂತಿಯ ಕಾಲ ಬೀದರ ಇತಿಹಾಸದ ನವೋದಯ ಕಾಲ ಶಿವ ಶರಣೆಯರ ಸಮ್ಮಿಲನ ಕಲ್ಯಾಣವನ್ನು ಕೈಲಾಸ ಸದೃಶ್ಯವನ್ನಾಗಿ ಮಾಡಿತು. ಶರಣರ ಅಡಿಗಳ ಮಹಿಮೆಯಿಂದ ಪಾವನವಾದ ಈ ನೆಲ ಜಲ ಅನೇಕ ಪ್ರೇಕ್ಷಣೀಯ ಸ್ಥಳಗಳನ್ನೊಳಗೊಂಡಿದೆ. ಬಸವೇಶ್ವರ ಕರ್ಮಭೂಮಿಯಾದುದರಿಂದ ಈ ಊರಿಗೆ ಬಸವಕಲ್ಯಾಣ ಎನ್ನುವ ಹೆಸರು ಬಂತು. ಕಲ್ಯಾಣಿ ಚಾಲ್ಯುಕರದೇಗುಲಗಳು ಕಲೆಯ ಕಣಜಗಳಾಗಿವೆ. ನಾರಾಣಪೂರ ಜಲಸಂಗಿಯ ಕಲೆ ಇಲ್ಲಿ ಮೆರೆದದ್ದನು ನೋಡಬಹುದು.

## ಬಸವಕಲ್ಯಾಣ ಸ್ಥಾಪನೆ

ಕ್ರಿ.ಶ.ಸು. 973 ರಲ್ಲಿ ಚಾಲ್ಯುಕರ 2ನೇಯ ತೈಲಪ ರಾಷ್ಟ್ರಕೂಟರ ಕೊನೆಯ ಅರಸ 2ನೇ ಕರ್ಕನನ್ನು ಸಂಹರಿಸಿ ಕಲ್ಯಾಣ ಚಾಲುಕ್ಯ ರಾಜ್ಯ ಸ್ಥಾಪಿಸಿದ ಆದರೆ ಕಲ್ಯಾಣ ನಗರ ನಿರ್ಮಾಣಗೊಳಿಸಿ ರಾಜ್ಯಧಾನಿಯನ್ನಾಗಿಸಿದವನ್ನು ಅದೆ ವಂಶದ ಸೋಮೇಶ್ವರ ಅಹವಮಲ್ಲ ಇತ ಅಷ್ಟೊಂದು ಸಮರ್ಥನಾಗಿರಲಿಲ್ಲ. ಅದರಿಂದ ಇತನ ಸೊದರ 6ನೇ ವಿಕ್ರಮಾದಿತ್ಯ ಕ್ರಿ.ಶ. 1076 ರಲ್ಲಿ ಪಟ್ಟಾಭಿಷೀಕ್ತನಾದನು. ಇತನ ಆಳ್ವಿಕೆಯ ಕಾಲಕ್ಕೆ ಕಲ್ಯಾಣ ನಗರ ಸಮೃದ್ಧಿಯ ಶಿಖರಕ್ಕೇರಿತ್ತು. ಆಡಳಿತ ಕಲೆ ಸಾಹಿತ್ಯ ಶಿಲ್ಪ ಮುಂತಾದವುಗಳಿಗೆ ಪುಟ ದೊರೆಯಿತು. ಅನೇಕ ದೇವಾಲಯ ಕಟ್ಟಿಸಿದರು. ಮಿತಾಕ್ಷರ ಸಂಹಿತ ಎಂಬ ಹಿಂದು ನ್ಯಾಯಶಾಸ್ತ್ರ ಗ್ರಂಥವನ್ನು ರಚಿಸಿದ ವಿಜ್ಞಾನೇಶ್ವರನೂ ಇವನ ಆಶ್ರಯ ಪಡೆದಿದನ್ನು ಇತ ಕಲ್ಯಾಣ ಕುರಿತು ಕ್ಷಿತಿತಿಲದಲ್ಲಿ ಕಲ್ಯಾಣದಂಥ ನಗರ ಹಿಂದಿರಲಿಲ್ಲ ಮುಂದೆ ಇರಲಾರದು. ವಿಕ್ರಮಾದಿತ್ಯನಂಥ ದೊರೆಯನ್ನು ಕಂಡಿಲ್ಲ. ಕೇಳಿಲ್ಲ ಎಂದು ಹೇಳುತ್ತಾನೆ. ವಿಕ್ರಮಾದಿತ್ಯನ ನಂತರ ಆತನ ಮಗ 3ನೇ ಸೋಮೇಶ್ವರ ಪಟ್ಟಕ್ಕೆ ಬಂದನು. ಇತನ ನಂತರ ಇತನ ಮಗ 2ನೇ ಜಗದೇಕಮಲ್ಲ ಪಟ್ಟಕ್ಕೆ ಬಂದನು.

ಜಗದೇಕಮಲ್ಲನ ತರುವಾಯ ಆತನ ಸೋದರ 3ನೇ ತೈಲ ಬಂದನು. ಇತನ ನಂತರ ಇತನಮಗ 4ನೇ ಸೋಮೇಶ್ವರ ತ್ರಿಭುವನ ಮಲ್ಲ ಬಂದನ್ನು ಇತನ ಕಾಲದಲ್ಲಿ ಕಲ್ಯಾಣದ ಚಾಲುಕ್ಯರ ಪ್ರಾಬಲ್ಯ ಇಳಿಮುಖವಾದಾಗ ಆವರೊಂದಿಗೆ ರಕ್ತ ಸಂಬಂಧ ಹೊಂದಿದ್ದ ಕಲ್ಯಾಣದ ಕಲಚೂರರ ದೊರೆ ಬಿಜ್ಜಳ ಚಾಲುಕ್ಯರನು ಮೂಲೆಗೊತ್ತಿ ಸ್ವತಂತ್ರವಾಗಿ ಆಳ್ವಿಕೆ ನಡೆಸಿದನು.

ಬಿಜ್ಜಳನ ಕಾಲ ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆಯನ್ನು ಕಂಡ ಚಿರಸ್ಮರಣೆಯ ಕಾಲವಾಗಿದೆ. ವೀರಶೈವ ಧರ್ಮದ ಮಹತ್ತರ ಕ್ರಾಂತಿಯನುಂಟು ಮಾಡಿದ ಬಸವೇಶ್ವರರು ಇವನ ಆ ಸ್ಥಾನದಲ್ಲಿ ಮಹಾಮಂತ್ರಿಯಾಗಿದ್ದರು. ವೀರಶೈವ ಧರ್ಮದ ತತ್ವಗಳಿಗೆ ಕಾರ್ಯನ್ವಯ ಸ್ವರೂಪವನು ನೀಡಿ ಲಿಂಗಾಯತ ಧರ್ಮವನ್ನು ಉದಯಿಸಿದರು. ಬಸವಣ್ಣ ಬಿಜ್ಜಳನ ಆ ಸ್ಥಾನದಲ್ಲಿದ್ದ ಧರ್ಮದ ಹೆಸರಿನಲ್ಲಿ ನಡೆಯುವ ಶೋಷಣೆಯನ್ನು ಹೋಗಲಾಡಿ ಸಲೆತ್ನಿಸಿದರು. ಕಲ್ಯಾಣವು ಸಮಾಜಕ ಧಾರ್ಮಿಕ ಚಟುವಟಿಕೆಯ ಕೇಂದ್ರವಾಯಿತು. ನಾನ ಕಡೆಗಳಿಂದ ಶರಣ ಶರಣೆಯರು ಕಲ್ಯಾಣ ದತ್ತ ಧಾವಿಸಿ ಬಂದರು. ಅನುಭವ ಮಂಟಪ ಸ್ಥಾಪನೆ ಆಯಿತ್ತು. ವಚನ ಸಾಹಿತ್ಯ ಬೆಳೆಯಿತ್ತು. ಜನಮನಕ್ಕೆ ನೆಲೆದೊರಕಿತ್ತು. ಅಂದಿನ ಆದರ್ಶಗಳು ಇಂದಿಗೂ ಜನರ ಬದುಕಿನಲ್ಲಿ ಹಾಸು ಹೊಕ್ಕಾಗಿ ನೆಲೆಸಿವೆ. ಬಸವಣ್ಣನವರು ಅಧ್ಯಾತ್ಮಿಕ ಸಾಮಾಜಿಕ ಧಾರ್ಮಿಕ ಕ್ರಾಂತಿ ಮಾಡಿದರು.

ಬಿಜ್ಜಳನ ನಂತರ ಅವನ ಮಕ್ಕಳು ನಾಲ್ಕು ಜನ ಸೋಮೇಶ್ವರ ಸಂಕಮ ಆಹವಮಲ್ಲ ಸಿಂಘಣ ಒಬ್ಬರಾದ ನಂತರ ಒಬ್ಬರು ರಾಜರಾದರು. ಅಷ್ಟರಲ್ಲಿ ಏಳಿಗೆಗೆ ಬಂದ ದೇವಗಿರಿಯ ಸೇವುಣರೂ ಹೊಯ್ಸಳರು ಪ್ರಬಲರಾದಂತೆ ಚಾಲುಕ್ಯವಂಶ ಅಳಿದು ಹೋಯಿತು.

ಕಲ ಚೂರಿಗಳ ಆಳ್ವಿಕೆ ಕೇವಲ ಕಾಲು ಶತಮಾನದಷ್ಟಾದರೂ ಕರ್ನಾಟಕ ಹಾಗೂ ದಕ್ಷಿಣ ಭಾರತದ ಇತಿಹಾಸದಲ್ಲಿ ಮಹತ್ವ ಪೂರ್ಣದ್ದಾಗಿದೆ. ವೀರಶೈವ ಧರ್ಮದ ಪುನರುದ್ಧಾರ. ವಚನ ಸಾಹಿತ್ಯ ಸೃಜನ ಈ ಕಾಲದಲ್ಲಾಯಿತ್ತು. ಇದು ಕನ್ನಡ ನಾಡಿಗೆ ಕಲಚೂರಿಗಳಿಂದ ಸಂದ ಅಪೂರ್ವ ಕಾಣಿಕೆಯೆಂದು ಹೇಳಬಹುದು.

## ಆಧಾರ ಗ್ರಂಥಗಳು

1. ಬೀದರ ಜಿಲ್ಲಾ ಸಾಂಸ್ಕೃತಿಕ ಅಧ್ಯಯನ ಬಸವರಾಜ ಸಬರದ.

# ಅನುಭವ ಮಂಟಪ

ಶರಣ -ಶರಣೆಯರ ಪುಣ್ಯಯ ನೆಲವಾದ ಬೀದರ ಜಿಲ್ಲೆಯ ಬಸವಕಲ್ಯಾಣದಲ್ಲಿ ಅನುಭವ ಮಂಟಪವಿದೆ. ತ್ರಿಪುರಾಂತರ ಕೆರೆಯ ಪಶ್ಚಿಮ ದಿಕ್ಕಿನ ದಿಬ್ಬದ ಮೇಲೆ ಕಟ್ಟಲಾಗಿರುವ ಈ ಕಟ್ಟಡವು ನವೀನವಾಗಿದ್ದು, ಪ್ರಶಾಂತವಾದ ಸ್ಥಾನದಲ್ಲಿದೆ. ವಿಶಾಲವಾದ ಸಭಾಗಂಣ ಸ್ವಲ್ಪ ಎತ್ತರದ ವೇದಿಕೆಯುಳ ಇದು ಉತ್ತರಾಭಿಮುಖವಾಗಿದು ನೋಡುಗರ ಗಮನ ಸೆಳೆಯುತ್ತದೆ. 12ನೇಯ ಶತಮಾನದ ಶಿವಶರಣರ ಅನುಭಾವ ಗೋಷ್ಟಿಯನ್ನು ನೆನಪಿಸುವ ಇದು ಸೊಗಸಾಗಿದೆ. ಶಿವಶರಣ ಬಣ್ಣದ ಭಾವಚಿತ್ರಗಳನ್ನು ಅಲ್ಲಿ ಚಿತ್ರಿಸಲಾಗಿದೆ.

ಪ್ರಶಾಂತವಾದ ಪ್ರಕೃತಿಯ ಮಡಿಲಲ್ಲಿ ನಿಂತ ಈ ಬೃಹತ್ತಾದ ಅನುಭಾವ ಮಂಟಪ ಪ್ರವೇಶಿಸಿದಾಗ ಶೂನ್ಯ ಪೀಠ ಸಂಪಾದಿಸಿದ ಶ್ರೀ ಅಲ್ಲಮಪ್ರಭುಗಳು ಅಧ್ಯಕ್ಷ ಸ್ಥಾನದಲ್ಲಿ ಕುಳಿತ ಹಾಗೂ ಅನೇಕ ಶರಣರಾದ ಬಸವಣ್ಣ ಅಕ್ಕಮಹಾದೇವಿ ಸಿದ್ಧರಾಮ ಚನ್ನ ಬಸವಣ್ಣ ಮಡಿವಾಳ ಮಾಚೀದೇವ ಹಡಪದ ಅಪ್ಪಣ್ಣ ಆಯ್ದಕಿ ಮಾರಯ್ಯ ಹರಳಯ್ಯ ಕಕ್ಕಯ್ಯ ಅಕ್ಕನಾಗಮ್ಮ ನೀಲಾಂಬಿಕೆ ಗಂಗಾಬಿಕೆ ಹೀಗೆ ಇನ್ನು ಸಾವಿರಾರು ಶರಣರು ಕುಳಿತು ವಿಚಾರಗೋಷ್ಠಿ ನಡೆಸಿದ ಈ ಸ್ಥಳದಲ್ಲಿ ನಿಂತಾಗ ಭಕ್ತಿ ರಸದಲ್ಲಿ ಮಿಂದಂಥ ಅನುಭವ ಆಗುತ್ತದೆ.

ಕಲ್ಯಾಣದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿ ವಿದ್ವನ್ಮಣಿಗಳಾದ ಶಿವಶರಣರು ಒಂದೆಡೆ ಸಾಮೂಹಿಕ ಚರ್ಚೆಗೆ ಸೇರಲು ಅವಕಾಶ ಕಲ್ಪಿಸಿದರು. ಈ ಸಭೆಯನ್ನು ಶಿವತತ್ವಗೋಷ್ಠಿ ವಚನ ಮಂಟಪ ಮಹಾಮನೆ ಮುಂತಾಗಿ ಉಲ್ಲೇಖಿಸಲಾಗಿದೆ. ವಿಶ್ವ ಪ್ರಪಥಮ ಪಾರ್ಲಿಮೆಂಟ ಎಂದು ಖ್ಯಾತಿ ಪಡೆದ ಬಸವಣ್ಣನವರಿಂದ ಸ್ಥಾಪಿಸಲ್ಪಟ್ಟ ಅನುಭಾವ ಮಂಟಪದ ಪ್ರಪ್ರಥಮ ಪೀಠಾಧಿಪತಿಗಳು ಅಲ್ಲಮ ಪ್ರಬುಗಳಾಗಿದರು. ಅನುಭವ ಮಂಟಪವೆಂದರೆ ? ಕಲ್ಲು ಮಣ್ಣಿನಿಂದ ಕಟ್ಟಿದಲ್ಲ ಮಾನವರ ಹೃದಯದಲ್ಲಿ ಕಟ್ಟಿದ್ದು, ವಿವಿಧ ಜನಾಂಗಗಳ ಜನರನ್ನು ಒಂದೆ ಹೃದಯವರನ್ನಾಗಿ ಬೆಸದದ್ದು ಕಲ್ಲು ಮಣ್ಣಿಂದ ಕಟ್ಟಿದ್ದು ಪ್ರಕೃತಿಯ ವಿಕೋಪಕ್ಕೆ ತುತ್ತಾಗುವುದು ಮಳೆಗಾಲಿಗೆ ಶಿಥಿಲವಾಗುತ್ತದೆಂದು ಸ್ಥಾವರಕಳಿವುಂಟು ಜಂಗಮಕ್ಕಳಿವಿಲ್ಲ ಎಂದವರು ಸಾಮಾನ್ಯ ಜನರ ಹೃದಯ ಮಂಟಪವನ್ನು ಕಟ್ಟಿದರು. ಅನುಭಾವಿಗಳ ಗೋಷ್ಟಿಗಳನ್ನು ನಡೆಸಿದರು. ಸ್ಥಾವರ ಮಂಟಪ ಸ್ಥಿರವಾದುದಲ್ಲ ಜಂಗಮ ಮಂಟಪ ಚಲನೆಶೀಲವಾದದ್ದು ಜಡತ್ವಮೀರಿ ಚೇತನತ್ವ ಸಾರುವುದು ಜಡವಸ್ತುಗಳನ್ನು ಬಳಸಿ ಕಟ್ಟಿರುವುದಕ್ಕೆ ಅಂತ್ಯವಿದೆ. ಜಂಗಮವಾದುದ್ದಕ್ಕೆ ಅಂತ್ಯವಿಲ್ಲ ಅನುಭವಿಸಿದಷ್ಟು ಅಧಿಕವಾಗುತ್ತದೆ. ವಿಶಾಲತ್ವವನ್ನು ಬೆಳೆಸುತ್ತದೆ. ಜಡ ವಸ್ತುಗಳ ಕಟ್ಟಡವನ್ನು ತಿರಸ್ಕರಿಸಿ ಚಲನಶೀಲವಾದ ಜ್ಞಾನಾತ್ಮಕ ವಿಚಾರಾತ್ಮಕ ಗೋಷ್ಠಿಯೇ ಅನುಭವ ಮಂಟಪ.

ಕರ್ನಾಟಕದಲ್ಲಿ ಶರಣರು ಉದಯಿಸುತ್ತಿರುವ ಮೊದಲು ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆಯಲ್ಲಿ ಹಲವು ವೈವಿಧ್ಯಮಯ ಸಂಪ್ರದಾಯ ಆಚರಣೆಗಳು ಆಳವಾಗಿ ಬೇರು ಬಿಟ್ಟಿದ್ದವು. ಮನುಷ್ಯ

ಮನುಷ್ಯರಲ್ಲಿ ಜಾತಿಯ ಅಡ್ಡ ಗೋಡೆಗಳನ್ನು ಕಟ್ಟಿ ಒಬ್ಬರನೋಬ್ಬರು ನೋಡದ ಪರಿಸ್ಥಿತಿಯತ್ತ ಸಾಮಾಜಿಕ ಜೀವನದಲ್ಲಿ ಅರಸ ಮಂತ್ರಿ ಪ್ರಮುಖರಾಗಿದ್ದರು. ಅರಸರಿಗೆ ಉಪದೇಶ ಹೇಳುವ ಪೋರೋಹಿತಶಾಹಿ ವರ್ಗ ಯಾವ ಕೆಲಸವಿಲ್ಲದೆ ಉಂಡು ಸುಖಲೋಲಪತೆಯಲ್ಲಿ ತೇಲಿದ್ದಿತ್ತು. ಧರ್ಮ ರಾಜನ ಆಶ್ರಯಕ್ಕೆ ಪೂರಕವಾದ ಮತ್ತು ಗುರುವಿನ ಒಪ್ಪಂದದ ಕೇಂದ್ರವಾಗಿತ್ತು. ದೇವರು ಮನೆ ಹೋಲ ಹಾದಿ ಕೈಗೊಂಡರಂತೆ ತುಂಬಿ ಹೋಗಿದ್ದವು. ದೇವರು ಮತ್ತು ಧರ್ಮದ ಹೆಸರಿನಲ್ಲಿ ರಾಜರು ಪುರೋಹಿತರೂ ನಿರಂತರ ಶೋಷಣೆ ಮಾಡುತ್ತಿದ್ದರು. ಸಮಾಜದಲ್ಲಿ ಸಾಮಾನ್ಯರ ಸ್ಥಿತಿ ಹೀನಾಯ ಮತ್ತು ಚಿಂತಾಜನಕವಾಗಿತ್ತು.

ಜಾತಿ ಮತ ಧರ್ಮಗಳಲ್ಲಿ ವಿಂಗಡಿಸಲಾದ ಜನರನ್ನು ಒಂದೆಡೆ ಕೂಡಿಸುವುದೆ ಅಂದಿನ ಸಂದರ್ಭದಲ್ಲಿ ಮಹತ್ವದಾಗಿತ್ತು. ಚದುರಿದೆ ಜನರನ್ನು ಕೂಡಿಸಿದ ಕೇಂದ್ರವೆ ಅನುಭವ ಮಂಟಪ ಗಂಡು ಹೆಣ್ಣು ಬೇಧವಿಲ್ಲದೆ ಎಲ್ಲರಿಗೂ ಅವಕಾಶ ನೀಡಿದರು.

ಮನೆ ಸುಂದರ ಸ್ವಚ್ಛ ಭವ್ಯವಾಗಿದ್ದರೆ ಸಾಲದು ಆ ಮನೆಯಲ್ಲಿರುವವರ ಮನಸ್ಸು ಸ್ವಚ್ಛವಾಗಿರಬೇಕು. ಮನಸ್ಸಿನ ಸ್ವಚ್ಛತೆಗೆ ಜ್ಞಾನ ಅರಿವು ಮುಖ್ಯ. ಜ್ಞಾನ ಪಡೆಯಲು ಮನುಷ್ಯನ ಮನಸ್ಸು ಪರಿಶುದ್ಧವಾಗಿರಬೇಕು. ಏಕಾಗ್ರತೆಬೇಕು. ತನ್ನ ಇರುವಿಗೆ ಕುರಿತು ವಿಚಾರಿಸುತ್ತಲೇ. ಸೃಷ್ಟಿಯ ಬಗ್ಗೆ ಚಿಂತನೆ ನಡೆಸಿದರು. ತಮ್ಮನ್ನೆ ತಾವೇ ಪ್ರಶ್ನಿಸಿಕೊಂಡರು. ಪ್ರಶ್ನೋಪ ಪ್ರಶ್ನೆಗಳ ಮೂಲಕ ಸಮಸ್ಯೆಗಳಿಗೆ ಪರಿಹಾರ ಕಂಡರು. ಶರಣರು ತಮ್ಮ ಆತ್ಮ ನಿರೀಕ್ಷಣೆಯೊಂದಿಗೆ ಸಮಾಜದ ವಿಷಮತೆಯಲ್ಲಿ ದೇವಸಾಕ್ಷಾತ್ಕಾರವನ್ನು ಕಾಣಲು ನಡೆಸಿದ ಚಿಂತನಾತ್ಮಕ ಕ್ರಿಯೆಯೇ ಅನುಭವ ನೀಡಿದ ವಚನ ರೂಪದ ಜ್ಞಾನವೇ ಅನುಭಾವ ಚರ್ಚಿಸಿದ ನೆಲೆಯೇ ಅನುಭವ ಮಂಟಪ.

ರಾಜಪ್ರಭುತ್ವನ್ನು ಪ್ರಜಾಪ್ರಭುತ್ವಕ್ಕೆ ತಂದು ದೇವರು ಧರ್ಮ ಸಮಾಜ ರಾಜಕೀಯ ಮಾನವ ಪ್ರಗತಿಯ ಎಲ್ಲಾ ವಿಷಯಗಳನ್ನು ಸಮಗ್ರವಾಗಿ ಚರ್ಚಿಸಿದವರಲ್ಲಿ ಶರಣರೇ ಪ್ರಥಮರು ಜಗತ್ತಿಗೆ ಹೊಸ ಜ್ಞಾನವನ್ನು ನೀಡಿದರು. ಅದು ಒಬ್ಬನೆ ದಾರ್ಶಕನಿಂದ ಮೂಡಿಬಂದ ಜ್ಞಾನವಲ್ಲ. ಸಮಾಜದ ಅನುಭಾವಿಗಳಿಂದ ಪಡೆದ ಜ್ಞಾನ ಆ ಜ್ಞಾನದ ಅಕ್ಷರ ರೂಪವೆ ವಚನ ಸಾಹಿತ್ಯ. ದೇವನೋಬ ನಾಮ ಹಲವು ಆಚಾರವೆ ಸ್ವರ್ಗ ಅನಾಚರವೇ ನರಕ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ ದಯವೇ ಧರ್ಮದ ಮೂಲ ದೇಹವೇ ದೇವಲಾಯವೆಂದು ಸಾರಿದರು.

ಶರಣರು ಧರ್ಮ ಅರ್ಧರ್ಮದ ಬಗ್ಗೆ ಸ್ಪಷ್ಟೀಕರಣವನ್ನು ನೀಡುತ್ತಾರೆ.

ಅರ್ಚನೆ ಪೂಜನೆ ನೇಮವಲ್ಲ
ಮಂತ್ರ ತಂತ್ರ ನೇಮವಲ್ಲ
ಧೂಪ ದೀಪಾರತಿ ನೇಮವಲ್ಲ

ಪರಧನ ಪರಸ್ತ್ರೀ ಪರದೈವಂಗಳಿಗೆರಗದಿಪ್ಪದೆ ನೇಮ. ಇಡಿ ಸಾಮಾಜಿಕ ವ್ಯವಸ್ಥೆಯು ವೇದಾಗಮ ಶಾಸ್ತ್ರಪುರಾಣಗಳ ಸಂಹಿತ ಪ್ರಕಾರ ಇರುತ್ತಿದ್ದ ಸಂದರ್ಭಗಳಲ್ಲಿ ಶರಣರು. ವೇದವೆಂಬುದು ಓದಿನಮಾತು, ಶಾಸ್ತ್ರವೆಂಬುದು ಸಂತೆಸುದ್ದಿ ಪುರಾಣವೆಂಬುದು ಪುಂಡರಗೋಷ್ಠಿ, ತರ್ಕವೆಂಬುದು ತಗರಹರಟೆ

ವಿನಯ ಸ್ವಾಭಿಮಾನದ ಜನತೆಗೆ ಸಹನೆ ತಾಳ್ಮೆ ಯಂತಹ ಗುಣಗಳನ್ನು ಬೆಳೆಸಿಕೊಳ್ಳಬೇಕೆಂದು ಶರಣರು ಸಾರಿದರು. ಸಹನೆಯಂತಹ ಮಾನವೀಯ ಮೌಲ್ಯಗುಣ ವೀರನಿಂದ ಮಾತ್ರ ಸಾಧ್ಯವೆಂದು ತಿಳಿಸಿದರು. ಸಿಟ್ಟು ತನ್ನ ವೈರಿ ಶಾಂತಿ ಪರರ ವೈರಿ ಎಂಬ ಗಾದೆ ಮಾತಿನಂತೆ ಸಿಟ್ಟು ಬೇಡವೆಂದು ಹೇಳಿದ ಶರಣರು ಶಾಂತಿ ಸಹನೆಯನ್ನು ಕಲಿಸಿದರು.

ಅಭಕ್ತ ಶಾಂತನಾಗಿರಬೇಕು

ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು. ವಚನದ ನುಡಿಯಬೇಕು ಜಂಗಮದಲ್ಲಿ ನಿಂದೆಯಿಲ್ಲದೆ. ಸಕಲ ಪ್ರಾಣಿಗ ತನ್ನಂತೆ ಭಾವಿಸಬೇಕು......

ಹುಟ್ಟಿನಿಂದ ಎಲ್ಲರೂ ಸರಿ ಸಮಾನರು, ಹುಟ್ಟಿನಿಂದಲೇ ಉತ್ತಮ ಕುಲಕ್ಕೆ ಬರುವುದಿಲ್ಲವೆಂದೂ ಎಲ್ಲರ ಹುಟ್ಟು ಸಾವು ಇಂದ್ರಿಯ ವ್ಯವಹಾರದ ಒಟ್ಟಾರೆ ಬದುಕು ಒಂದೆ ಪ್ರಕಾರಾದೆಂಬುದನ್ನು ಬಸವಣ್ಣನವರು ವೈಚಾರಿಕವಾಗಿ ಪ್ರತಿಪಾದಿಸಿದರು.

ಹೊಲೆಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ ಜಲ ಬಿಂದುವಿನ ವ್ಯವಹಾರ ಒಂದೇ ರೋಷ ಪರುಷ ವಿಷಯಾದಿಗಳೆಲ್ಲಾ ಒಂದೆ, ಏನನೋದಿ ಏನಕೇಳಿ ಏನು ಫಲ ? ಕುಲಜನೆಂಬುವುದಕ್ಕೆ ದೃಷ್ಟ? ಸಪ್ತಧಾತು ಸಮಂ ಪಿಂಡಂ ಸಮಯೋಗಿನಿ ಸಮುದ್ಭವಂ ಎಂದುದಾಗಿ.

ಕಾಸಿ ಕಮ್ಮೂರನಾದ ಬೀಸಿ ಮಡಿವಾಳನಾದ ಹಾಸ ನಿಕ್ಕಿ ಸಾಲಿಗನಾದ, ವೇದವನೊದಿ ಹಾರುವನಾದ ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ ? ಇದು ಕಾರಣ ಕೂಡಲ ಸಂಗಮದೇವಾ ಲಿಂಗ ಸ್ಥಲವನರಿದವನೇ ಕುಲಜನು.

ಬಸವಣ್ಣನವರು ಬಡತನ ಭೀಕರವಾಗಿರುವಾಗ ಸಿರಿತನ ಕೆಟ್ಟದೆಂದು ಅವರು ನಿಂದಿಸುತ್ತಾರೆ. ಶ್ರೀಮಂತರ ದೌರ್ಜನ್ಯವನ್ನು ಅವರು ದೂರುವ ಬಗ್ಗೆ.

"ಹಾವು ತಿಂದವರ ನುಡಿಸಬಹುದು.

ಗರ ಹೊಡೆದವರ ನುಡಿಸಬಹುದು.

ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ
ಬಡತನವೆಂಬ ಮಂತ್ರವಾದಿ ಹೋಗಲು
ಒಡನೆ ನುಡಿವರಯ್ಯ ಕೂಡಲ ಸಂಗಮದೇವಾ"

ಜಗತ್ತಿನ ಅನೇಕ ಸಮಸ್ಯೆಗಳಿಗೆ ಅಹಂಕಾರವೆ ಮೂಲ ಅಹಂಕಾರವೆ ಅಸಂಸ್ಕೃತಿ, ವಿನಯವೆ ಸಂಸ್ಕೃತಿ, ಬಸವಣ್ಣನವರು ವಿನಯದ ಸಾಕಾರ ಮೂರ್ತಿ. ಅಂತ್ಯಜ ಮೊದಲುಗೊಂಡು ಎಲ್ಲರನ್ನು ಅವರು ಪಡೆದಿದ್ದಾರೆಂಬುದನ್ನು ಸಮಾಜದ ಹಿರಿಯರೆಂಬುದನ್ನು ಪರೀಕ್ಷಿಸಲು ಅವರ ಸಂಸ್ಕೃತಿಯೇ ಒರೆಗಲ್ಲಾಗುತ್ತದೆ.

"ಪುಣ್ಯ ಪಾಪವೆಂಬುವು ತಮ್ಮಿಷ್ಟ ಕಂಡಿರೇ
ಅಯ್ಯೊ ಎಂದರೆ ಸ್ವರ್ಗ ಎಲ್ಲವೊ ಎಂದಡೆ ನರಕ
ದೇವಾ ಭಕ್ತ ಜಿಯಾ ಜೀಯಾ ಎಂಬ ನುಡಿಯೊಳಗೆ
ಕೈಲಾಸ ಮೈ ದೊದೆ ಕೂಡಲ ಸಂಗಮ ದೇವಾಅ
ಅ ಜ್ಞಾನದ ಅಂಧಕಾರದಲ್ಲಿ ತೊಳಲುತ್ತಿದ್ದ ಜನರಿಗೆ ನೀತಿಯ ಜ್ಯೋತಿಯನ್ನು ಕರುಣಿಸಿದ್ದಾರೆ.
"ಕೆಳಬೇಡ ಕೂಲಬೇಡ ಹುಸಿಯ ನುಡಿಯಲು ಬೇಡ
ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ.
ತನ್ನ ಬಣ್ಣಿಸಬೇಡ. ಇದಿರ ಹಳಿಯಲು ಬೇಡ ಇದೇ.
ಅಂತರಂಗ ಸುದ್ದಿಯೆ ಬಹಿರಂಗ ಶುದ್ಧಿ"

ಕಾಯಕದಲ್ಲಿ ಬದ್ಧತೆ
"ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದರೂ ಮರೆಬೇಕು.
ಲಿಂಗಪೂಜೆಯಾದರೂ ಮರೆಯಬೇಕು.
ಜಂಗಮ ಮುಂದಿದ್ದರೂ ಹಂಗುಹರಿಯಬೇಕು.
ಕಾಯಕವೇ ಕೈಲಾಸವಾದ ಕಾರಣ
ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು,"



ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ
ಎಂದು ಬಸವಣ್ಣನವರು ಹೇಳಿದರೆ ಇದನ್ನು ಸಮರ್ಥಿಸುವಂತೆ ಅಲ್ಲಪ್ರಭು.

"ಕೊಟ್ಟ ಕುದರೆಯನೇರಲರಿಯದೆ
ಮತ್ತೊಂದು ಕುದುರೆಯ ಬಯಸುವವರು

ವೀರರೂ ಅಲ್ಲ ಧೀರರೂ ಅಲ್ಲ
ಇದು ಕಾರಣ
ನೆರೆ ಮೂರು ಲೋಕವೆಲ್ಲವೂ
ಹಲ್ಲಣವ ಹೊತ್ತುಕೊಂಡು ಬಳಲುತ್ತಿದ್ದಾರೆ.
ಗುಹೇಶ್ವರ ಲಿಂಗ ವನವರೆತ್ತ ಬಲ್ಲರೋ"
ಎಂಬ ಮಾತಿನಲ್ಲಿ ಈ ನಿಲುವನ್ನು ಸೊಗಸಾಗಿ ಸಮರ್ಥಿಸುತ್ತಾನೆ.

ಮಾಯೆಯನ್ನು ಕುರಿತು ಶಿವಶರಣರ ನಿಲುವು ಪರಂಪರಾಗತ ನಿಲುವಿಗಿಂತ ಬೇರೆಯಾದದ್ದು ಅಲ್ಲಮ ಮಾಯೆಯನ್ನು ಕುರಿತು.

"ಹೊನ್ನುಮಾಯೆ ಎಂಬುರು
ಹೊನ್ನು ಮಾಯೆ ಅಲ್ಲ
ಹೆಣ್ಣು ಮಾಯೆ ಎಂಬುರು
ಹೆಣ್ಣು ಮಾಯೆ ಅಲ್ಲ
ಮಣ್ಣು ಮಾಯೆ ಎಂಬರು
ಮಣ್ಣು ಮಾಯೆ ಅಲ್ಲ
ಮನದ ಮುಂದಣ ಆಶೆಯೇ
ಮಾಯೆ ಕಾಣಾ ಗುಹೇಶ್ವರಾ."

ಲಿಂಗಾನಂದ ಸಾಗರದಲ್ಲಿ ಮುಳುಗಿದಂತೆ, ಲಿಂಗ ಅಂಗ ಸಂಗ (ದೇವ ಭಕ್ತ ಭಕ್ತಿ) ಈ ಮೂರು ಅಳಿದು ಕೇವಲ ತಾನೇ ತಾನಾದ ಬಯಲೇ ಬಯಲು ಉಳಿಯುತ್ತದೆ. ಆಗಿನ ಆನಂದ ಅನುಭವಿಸಿಯೆ ತೀರಿಸ ಬೇಕು.

ಅಮೃತ ಸಾಗರ ದೊಳಗಿದ್ದು ಆಕಳ ಚಿಂತೆ ಏಕೆ ?
ಮೇರು ಗಿರಿಯೊಳಗಿದ್ದು ಜಗವ ತೋರುವ ಚಿಂತೆ ಏಕೆ ?
ಪ್ರಸಾದದೊಳಗಿದ್ದು ತತ್ವ ವಿಚಾರದ ಚಿಂತೆ ಏಕೆ ?
ಕರಸ್ಥಲ ದೊಳಗೆ ಇಷ್ಟಲಿಂಗವಿರಲು
ಮತ್ತಿನ್ಯಾವ ಚಿಂತೆ ಏಕೆ ಹೇಳು ಗುಹೇಶ್ವರ
ಇದು ಅಲ್ಲಮ ಪ್ರಭು ಹೇಳುತ್ತಾರೆ.

ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡುವುದೇ ಕೂಡಲಸಂಗಮದೇವ ಕಲ್ಲನಾಗರ ಕಂಡರೆ ಹಾಲ ನೆರೆಯೆಂಬರು, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ ಉಂಬ ಜಂಗಮ ಬಂದರೆ ನಡೆಯೆಂಬರು ಉಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ.

ಇವು ಕನ್ನಡ ಸಾಹಿತ್ಯದಲ್ಲಿ ನವ ಯುಗವನ್ನೇ ತಂದಿವೆ. ಜನಸಾಮಾನ್ಯರ ಭಾಷೆಯಲ್ಲಿದ್ದ ಈ ವಚನಗಳ ಮೂಲ ಉದ್ದೇಶ ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ದುಸ್ಥಿತಿಯನ್ನು ಹೋಗಲಾಡಿಸುವುದಾಗಿತ್ತು. ಪ್ರಪಂಚದ ಇತಿಹಾಸದಲ್ಲಿ ಇವರಂತಹ ದಿವ್ಯ ಶಕ್ತಿವುಳ್ಳ ಯುಗ ಪ್ರವರ್ತಕರು ಅಪೂರ್ವ ಅಂಥ ದಿವ್ಯ ಪುರುಷ ಬಸವೇಶ್ವರರನ್ನು ಆಕರ್ನಾಟಕದ ಮಾರ್ಟಿನ್ ಲೂಥರ್‌ರಆ ಎಂದು ಕರೆದಿರುವುದುರಲ್ಲಿ ಆಶ್ಚರ್ಯವೇನೂ ಇರಲಾರದು, ಬಸವಣ್ಣ ಭಕ್ತಿ ಭಂಡಾರಿ ಸಮಾಜಿಕ ಆಂದೋಲನಕಾರ ಮಾನವತಾವಾದಿ.

## ವೀರಶೈವ ಧರ್ಮ

ಲಿಂಗ ಮತ್ತು ಜಂಗಮ ಸೃಷ್ಟಿಕರ್ತ ಬಸವೇಶ್ವರರೆಂದು ಶೂನ್ಯ ಸಂಪದನೆಯಲ್ಲಿ ಹೇಳಲಾಗಿದೆ. ಅಷ್ಟಾವರಣಗಳಾದರು 1) ಗುರು (ಭೋಧಕ) 2) ಲಿಂಗ (ಶಿವನಗುರುತ್ತು) 3) ಜಂಗಮ (ಧರ್ಮೋಪದೇಶಕ) 4) ಪಾದೋದಕ (ಪವಿತ್ರ ಗಂಗೆ) 5) ಪ್ರಸಾದ (ಅನುಗ್ರಹ) 6) ಭಸ್ಮ (ವಿಭೋತಿ) 7) ರುದ್ರಾಕ್ಷಿ (ಶಿವನ ಅಥವಾ ರುದ್ರನ ಅಕ್ಷಿಯಂತಿರುವ ಒಂದು ಬಗೆಯ ಕಾಯಿ) 8) ಮಂತ್ರ (ಪವಿತ್ರ ವಚನ)

ಇವು ವೀರಶೈವ ತತ್ವದಲ್ಲಿ ಪ್ರಮುಖವಾದ ಅಂಶಗಳಾಗಿವೆ. ಈ ಎಂಟು ರಕ್ಷೆಗಳು ಭಕ್ತನನ್ನು ಶುದ್ಧಿಗೊಳಿಸಿ ಅಧ್ಯಾತ್ಮ ಹೊಂದಲು ಸಿದ್ಧಿಗೊಳಿಸುತ್ತದೆ. ಉಪಯನದ ಸ್ಥಾನವನ್ನು ವೀರಶೈವ ಮತದಲ್ಲಿ ದೀಕ್ಷೆ ಪಡೆದಿದೆ. ಅವರ ಮಂತ್ರ ಓಂ ನಮ್ಮ ಶಿವಾಯ.

ಶಕ್ತಿ ಶಿಷ್ಟಾದ್ವೈವತ ಎಂದರೆ ಪರಮಾತ್ಮನು ಸಕಲ ಜೀವಾತ್ಮನೇ ಮೂಲ ಸ್ವರೂಪನು ಜೀವಾತ್ಮರು ಪರಮಾತ್ಮನ್ನ ಸೇರಿಕೊಂಡು ಒಂದಾಗುತ್ತಾರೆ. ಆ ಪರಮಾತ್ಮನು ಶಕ್ತಿ ರೂಪನಾದ ಪ್ರಕೃತಿಯೊಂದಿಗೆ ಇರತಕ್ಕವನು ಎಂದು ಶ್ರೀಪತಿ ಪಂಡಿತರು ಮಂಡಿಸಿದ್ದಾರೆ. ಇದು ಬಸವೇಶ್ವರರು ಪ್ರತಿಪಾದಿಸಿದರು. ಇದರ ಪ್ರಕಾರ ಜೀವಾತ್ಮನು ಮುಕ್ತಿಯ ಅವಸ್ಥೆಯಲ್ಲಿ ಪರಮಾತ್ಮನೊಂದಿಗೆ ಐಕ್ಯ ಹೊಂದುವುದರಿಂದ ಮುಕ್ತಿ ಪದವನ್ನು ಐಕ್ಯ ಸ್ಥಳವೆಂದು ಕರೆದಿದ್ದಾರೆ.

ಹೀಗೆ ಅನುಭವ ಮಂಟಪದಲ್ಲಿ ಶಿವಶರಣರು ಧಾರ್ಮಕ ಸಾಮಾಜಿಕ ಅಧ್ಯಾತ್ಮಿಕ ವಿಷಯ ಕುರಿತು ಸಾಮೂಹಿಕ ಚರ್ಚೆ ಮಾಡುತ್ತಿದ್ದರು.

## ಆಧಾರ ಗ್ರಂಥಗಳು


1. ಅನುಭವ ಮಂಟಪ ಸ್ಮರಣ ಸಂಚಿಕೆ ಪ್ರಧಾನ ಸಂಪಾದಕರು ಶರಣ ರಮಜಾನ ದರ್ಗಾ
2. ಬೀದರ ಜಿಲ್ಲಾ ದರ್ಶನ ಡಾ॥ ಜಗನ್ನಾಥ ಹೆಬ್ಬಾಳೆ (ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಬೀದರ.)
3. ಕರ್ನಾಟಕ ಇತಿಹಾಸ ಪರಿಚಯ ಫಾಲಾಕ್ಷ.

# ನಾರಾಯಣಪುರ

ಬಸವಕಲ್ಯಾಣದಿಂಧ ಸುಮಾರು 3 ಕಿ.ಮೀ. ಅಂತರದಲ್ಲಿರುವ ನಾರಾಯಣಪೂರದಲ್ಲಿ ಶಿವಾಲಯ ದೇವಾಲಯವಿದೆ. ಸಾವಿರ ವರ್ಷಗಳಿಗಿಂತಲೂ ಪ್ರಾಚೀನವಾದ ಇದು ಸುಂದರವಾಗಿದೆ. ಗರ್ಭಗುಡಿ ಮಾತ್ರ ಉಳಿದಿದ್ದು ಮುಂದಿನ ಪ್ರಾಂಗಣ ಹಾಳಾಗಿದ್ದರೂ ಅದರ ರಚನ ವಿನ್ಯಾಸ ಶಿಲ್ಪಕಲೆಯ ಮಾದರಿ ಚಕಿತಗೊಳಿಸುತ್ತದೆ. ಗರ್ಭಗುಡಿಯಲ್ಲಿ ಶಿವಲಿಂಗವಿದ್ದು ಅದನ್ನು ಚಾಲುಕ್ಯರು ಕಟ್ಟಿಸಿದ ಶಿವ ಮಂದಿರವೆಂದು ತಿಳಿಯಲಾಗಿದೆ. ಅದರ ಮುಂದಿರುವ ಒಂದು ಶಿಲಾಸಾನದಲ್ಲಿ ತ್ರಿಭುವನ ತಿಲಕ ಶ್ರೀ ರಾಯ ನಾರಾಯಣಪೂರ ಮತ್ತು ರಾಯನಾರಯಣಪುರ ಎಂಬ ಉಲ್ಲೇಖವಿದೆ.

ಗುಡಿಯ ಮಂಟಪದ ಸ್ತಂಭಗಳ ಮೇಲೆ ಮಂದನಿಕೆಯರನ್ನು ವಿವಿಧ ಭಂಗಿಗಳಲ್ಲಿ ಕೆತ್ತಲಾಗಿದ್ದು ಅಲ್ಲಲ್ಲಿ ಅಂಭಾ ಭವಾನಿ, ಈಶ್ವರ ಆಂಜನೇಯ ಮತ್ತು ವಾಡಪ್ಪ ಸ್ವಾಮಿಯ ಮೂರ್ತಿಗಳನ್ನು ಕೂರಿಸಲಾಗಿದೆ. ಚಾಲುಕ್ಯ ವಾಸ್ತು ಶಿಲ್ಪ ದಮಾದರಿಯನ್ನು ಕಾಣಿಸುವ ಈ ದೇವಾಲಯದ ಪ್ರವೇಶ ದ್ವಾರದಲ್ಲಿ ಸೊಗಸಾದ ಶಿಲ್ಪಕಲೆಯನ್ನು ನೋಡಬಹುದಾಗಿದೆ.

ಕಲ್ಯಾಣದ ಚಾಲುಕ್ಯರ ಇತಿಹಾಸವು ಅನೇಕ ದೃಷ್ಟಿಯಿಂದ ವೈಭವ ಪೂರ್ಣವಾಗಿದೆ. ಈ ಮನೆತನದಲ್ಲಿ ಆಗಿಹೋದ ಅನೇಕ ಅರಸರು ತಮ್ಮ ಆಳ್ವಿಕೆಯ ಕಾಲದಲ್ಲಿ ಅನೇಕ ಮಹತ್ವ ಪೂರ್ಣ ಕಾರ್ಯಗಳನ್ನು ಮಾಡಿದ್ದಾರೆ. ದೇಶದ ಸಾಮಂತರು ಮಾಂಡಳೀಕರು ಮಹಾಮಂಡಲೇಶ್ವರರು ಮಹಾದಂಡನಾಯಕರು ಜನ ಸಾಮಾನ್ಯರು ತಾವು ಕೈಗೊಂಡ ಅನೇಕ ಪುಣ್ಯ ಕಾರ್ಯಗಳ ವಿಷಯವಾಗಿ ನೂರಾರು ದಾಖಲೆಗಳನ್ನು ಬಿಟ್ಟಿದ್ದಾರೆ. ಇವು ಅತ್ಯಂತ ಅಮೂಲ್ಯವಾದ ಐತಿಹಾಸಿಕ ದಾಖಲೆಗಳು ಈ ದಾಖಲೆಗಳು ಸಾಮಾನ್ಯವಾಗಿ ಶಿಲಾ ಸ್ತಂಭ ತಾಮ್ರ ಪತ್ರಗಳ ಮೇಲೆ ಬರೆಯಲ್ಪಟ್ಟಿವೆ. ಈ ಶಾಸನಗಳು ವಿವಿಧ ಆಕಾರಗಳಲ್ಲಿದ್ದು ಅನೇಕ ಶಾಸನಗಳು ಭಗ್ನವಾಗಿವೆ.

ಚಾಲುಕ್ಯರ ಆಳ್ವಿಕೆಯಲ್ಲಿ ಅಸಂಖ್ಯಾತ ಮಂದಿರಗಳು ನಿರ್ಮಾಣವಾದವು ಈ ಮಂದಿರಗಳಿಗೆ ರಾಜರು ಮಂತ್ರಿಗಳು ದಾನಿಗಳು ಅನೇಕ ಪ್ರಕಾರದ ದಾನಗಳನ್ನು ನೀಡಿದ ದಾಖಲೆಗಳಲ್ಲಿ ತಮ್ಮ ಕಾಲದ ರಾಜರ ಹಾಗೂ ಹಲವಾರು ರಾಜಕೀಯ ವಿಷಯಗಳನ್ನು ತಿಳಿಸಿದ್ದಾರೆ. ಮುಸ್ಲಿಂ ಅರಸರ ಆಳ್ವಿಕೆಯಲ್ಲಿ ದೇಶದ ಸಾಮಾಜಿಕ ಧಾರ್ಮಿಕ ಪರಂಪರೆಗೆ ಧಕ್ಕೆಯುಂಟಾಯಿತು. ರಾಜಕೀಯ ಆಶ್ರಯವಿಲ್ಲದುದರಿಂದ ಅನೇಕ ಮಂದಿರಗಳು ತಮ್ಮ ಆಸ್ತಿತ್ವ ಕಳೆದುಕೊಂಡವು ಇದರ ಜೊತೆಗೆ ಅಲ್ಲಿಯ ಶಿಲಾಶಾಸನಗಳು ಹಾಳಾದವು. ಆದ್ದರಿಂದ ದೇಶದ ವಿವಿಧ ಭಾಗಗಳಲ್ಲಿ ದಾಖಲೆಗಳು ವಿಫಲವಾಗಿ ದೊರೆಯುವಂತೆ ಈ ಭಾಗಗಳಲ್ಲಿ ದೊರೆಯುವುದಿಲ್ಲ.

ನಾರಾಯಣಪುರದ ಶಿಲಾಶಾಸನವೊಂದು ಬಸವಕಲ್ಯಾಣದ ಕೋಟೆಯಲ್ಲಿದೆ. ಇದು ಚಾಲುಕ್ಯ ವಿಕ್ರಮಾದಿತ್ಯನು 1117 ರಲ್ಲಿ ನಾರಾಯಣಪುರದ ನಾರಾಯಣ ದೇವರಿಗೆ ಅನೇಕ ದಾನಗಳನ್ನು ಕೋಟ ಸಂಗತಿಯನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಆ ಕಾಲದ ಮಹತ್ವದ ವ್ಯಕ್ತಿಗಳ ಉಲ್ಲೇಖವಿದ್ದು ಅವರು ಕೈಗೊಂಡ ದಾನ ಕಾರ್ಯಗಳನ್ನು ವಿವರಿಸುತ್ತದೆ. ಇಂದು ನಾರಾಯಣಪುರದಲ್ಲಿ ನಾರಾಯಣ ಮಂದಿರ ವಿರದಿದ್ದರೂ ಈ ಶಾಸನದ ಮೂಲಕ ಈ ಮಂದಿರದ ಪ್ರಸಿದ್ಧಿಯ ಕುರಿತು ಹಲವು ವಿಷಯಗಳನ್ನು ತಿಳಿಯಬಹುದು. ನಾರಾಯಣಪೂರ ಕೆರೆಯ ಸಮೀಪದ ಹೊಲದಲ್ಲಿ ಬಿದ್ದ ಸ್ತಂಭ ಶಾಸನವು ಚಾಲುಕ್ಯ ಬೋಲೋಕಮಲ್ಲ 3ನೇ ಸೋಮೇಶ್ವರನ ಕಾಲದ್ದು (1132) ಇದರಲ್ಲಿ ಸೋಮೇಶ್ವರನ್ನು ನಾರಾಯಣಪುರದ ಈಶ್ವರ ಮಂದಿರಕ್ಕೆ ದಾನಕೋಟ ವಿವರವಿದೆ.

## ಆಧಾರ ಗ್ರಂಥಗಳು


1. ಬೀದರ ಜಿಲ್ಲಾ ಸಾಂಸ್ಕೃತಿಕ ಅಧ್ಯಯನ - ಬಸವರಾಜ ಸಬರದ
2. ಬೀದರ ಜಿಲ್ಲಾ ದರ್ಶನ - ಡಾ॥ ಜಗನ್ನಾಥ ಹೆಬ್ಬಾಳೆ (ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಬೀದರ.)

# ಜಲಸಂಗಿ

ಜಲಸಂಗಿ ಗ್ರಾಮವು ಬೀದರ ಜಿಲ್ಲೆಯ ತಾಲೂಕಿನ ಹುಮನಾಬಾದ ಪಟ್ಟಣದಿಂದ 10 ಕಿ.ಮೀ. ದೂರದಲ್ಲಿರುವ ಜಲಸಂಗಿ ಪ್ರಾಚೀನ ಹಳ್ಳಿ ಮತ್ತು ಒಂದು ಐತಿಹಾಸಿಕ ಸ್ಥಳ ಈ ಜಲಸಂಗಿಯಲ್ಲಿ ಕಲ್ಯಾಣ ಚಾಲುಕ್ಯರ ಪ್ರಸಿದ್ಧ ದೊರೆ 6ನೇ ವಿಕ್ರಮಾದಿತ್ಯನ ಕಾಲದಲ್ಲಿ ನಿರ್ಮಿಸಲಾಗಿರುವ ಈಶ್ವರ ದೇವಾಲಯ ಇಲ್ಲಿದೆ. ಪಾಂಡವರು ತಮ್ಮ ವನವಾಸದ ದಿನಗಳಲ್ಲಿ ಗುಪ್ತವಾಗಿ ವಿರಾಟ ರಾಜನ ಆಶ್ರಯದಲ್ಲಿದ್ದರು. ಆ ವಿರಾಟ ರಾಜನ ರಾಜಧಾನಿಯೇ ಈ ಜಲಸಂಗಿಯೆಂದು ಸ್ಥಳೀಯ ಪ್ರತೀತಿಯುಂಟು.

ಗ್ರಾಮದ ಕೆರೆಯ ದಂಡೆಯ ಮೇಲೆ ಪೂರ್ವಾಭಿಮುಖವಾಗಿ ಕಂಗೊಳಿಸುವ ಈ ಕಲ್ಲೇಶ್ವರ ದೇವಾಲಯ ವಾಸ್ತು ಶಿಲ್ಪಕ್ಕೆ ಚಾಲುಕ್ಯರು ನೀಡಿದ ಶ್ರೇಷ್ಠ ಕೊಡಗೆಯಾಗಿದೆ. ಸುಮಾರು ಮೂರು ಅಡಿ ಎತ್ತರದ ವೇದಿಕೆಯ ಮೇಲೆ ನಿಂತಿರುವ ಈ ಗುಡಿಯ ಗರ್ಭಗುಡಿ ನವರಂಗ ಮತ್ತು ಕೈಸಾಲೆಗಳನ್ನು ಹಿಂದೆ ಹೊಂದಿರುವ ಕುರುಹುಗಳಿವೆ. ನವರಂಗದ ಛಾವಣಿಯ ಕೆಲವು ಭಾಗಗಳು ಬಿದ್ದು ಹೋಗಿದ್ದು ಈಗ ಕೈಸಾಲೆ ಕಾಣುವುದಿಲ್ಲ. ಗರ್ಭಗುಡಿಯ ಗೋಡೆಯ ಹೊರಭಾಗದಲ್ಲಿ ಹಲವಾರು ಮದನಿಕಾ ಸ್ತ್ರೀಯರ ಮೂರ್ತಿಗಳನ್ನು ಅತ್ಯಂತ ಸುಂದರವಾಗಿ ಕೆತ್ತಲಾಗಿದೆ. ವಿಕ್ರಮಾದಿತ್ಯನ ಹೆಸರನ್ನು ಬರೆಯುತ್ತಿರುವ ಶಿಲಾಬಾಲಕೆಯೋರ್ವಳ ಭಂಗಿ ತುಂಬಾ ಸುಂದರವಾಗಿದೆ. ಕೆತ್ತನೆಗಳಲ್ಲಿ ತ್ರಿಮೂರ್ತಿಗಳ ಸ್ವರೂಪ ವಿರಾಹಾವತಾರ ಮದನ ಮನೋಹರಿ ವಿಗ್ರಹದರ್ಪಣ ಸುಂದರಿಯ ಶಿಲ್ಪಿ. ನಾಟ್ಯ ಗಣಪತಿ ನಾಗನೃತ್ಯ ಮಯೂರಿ ನರಸಿಂಹಾವತಾರ ಮತ್ತು ತಾಯಿ ಮಗುವಿನ ಶಿಲ್ಪ ಕಲಾಕೃತಿಗಳು ತುಂಬ ಆಕರ್ಷಕವಾಗಿವೆ.

ವಿವಿಧ ಭಂಗಿಯ ಶಿಲಾಬಾಲಿಕೆಯರ ಕೆತ್ತನೆ ಕೆಲಸವು ಬೆರಗುಗೊಳಿಸುವಂಥದು ವಿವಿಧ ಆಭರಣಗಳ ಸೂಕ್ಷ್ಮ ಕೆತ್ತನೆಯು ಮನಮೋ ಹಕ್‌ವಾಗಿದ್ದು ಈ ದೇವಾಲಯದ ನಿರ್ಮಾಣದಲ್ಲಿ ವಾಸ್ತು ಶಿಲ್ಪದ ಭವ್ಯತೆ ಮತ್ತು ಮಹೋನ್ನತಿಯನ್ನು ಗುರುತಿಸಬಹುದಾಗಿದೆ. ವಿವಿಧ ನೃತ್ಯ ಭಂಗಿಯಲ್ಲಿರುವ ಅನೇಕ ಶಿಲಾ ಬಾಲಕೆಯರು ಆಕರ್ಷಣೀಯರಾಗಿದ್ದಾರೆ.

ಜಲಸಂಗಿಯ ಕಲ್ಲೇಶ್ವರ ದೇವಾಲಯ ಅತ್ಯಂತ ಪ್ರಸಿದ್ಧವಾದುದು ಮಂದಿರ ಸಣ್ಣದಾದರೂ ಅದರಲ್ಲರಳಿದ ಕಲೆ ದೊಡ್ಡದು ಕಲಾಶಿಲ್ಪಿಯ ಕಲಾ ನೈಪುಣ್ಯವನ್ನು ಎತ್ತಿ ಹೇಳುತ್ತವೆ ವೀರಭದ್ರ ನೃತ್ಯ ಗಣಪತಿ ದಕ್ಷಿಣ ಮೂಲ ಮೂರ್ತಿ ಮತ್ತು ದುರ್ಗಿ ಇವು ಸುಂದರವಾಗಿ ಕೆತ್ತಲ್ಪಟ್ಟಿವೆ. ಚಾಲುಕ್ಯರು ಅಳಿದು ಹೋಗಿದ್ದರೂ ಇಂದಿಗೂ ಅವರ ನೆನಪು ಆ ಕಲಾ ಮೂರ್ತಿಗಳನ್ನು ನೋಡಿದಾಗ ಕಂಗೊಳಿಸುತ್ತದೆ. ಶಾಸನ ಬರೆಯುತ್ತಿರುವ ಶಿಲಾಬಾಲಿಕೆಯ ಚಿತ್ರ ಕಣ್ಣಿಗೆ ಕಟ್ಟುವಂತಿದೆ. ಇಲ್ಲಿ ಇನ್ನು ಅನೇಕ ಅಳಿದುಳಿದ ಐತಿಹಾಸಿಕ ಕಟ್ಟಡಗಳು ನೋಡಲು ಸಿಗುತ್ತವೆ.

## ವೀರಭದ್ರೇಶ್ವರ ದೇವಾಲಯ

ಹುಮನಾಬಾದದಲ್ಲಿರುವ ಇದು ಬೀದರ ಜಿಲ್ಲೆಯ ಪ್ರಾಚೀನ ದೇವಾಲಯಗಳಲ್ಲೊಂದು ಕೋಟೆಗೆ ಹೊಂದಿಕೊಂಡು ನಿರ್ಮಾಣಗೊಂಡಿರುವ ಇದು ಭದ್ರವಾಗಿದ್ದು, ವಾಸ್ತುಶೈಲಿಯ ದೃಷ್ಟಿಯಿಂದ ಆಕರ್ಷಣೆಯವಾಗಿದೆ. ಪೂರ್ವಾಭಿಮುಖವಾಗಿ ಕಟ್ಟಲಾಗಿರು ಈ ಕಟ್ಟಡವು ವಿಶಾಲವಾಗಿದ್ದು, ಪ್ರಾಂಗಣವನ್ನು ಗೋಶಾಲೆಗಳು ಅವರಿಸಿವೆ. ಗರ್ಭಗೃಹ ಸುಕನಾಸಿ ಮತ್ತು ಮುಖ ಸಜ್ಜೆಗಳಿಂದ ಕೂಡಿರುವ ಇದರ ಮುಂಭಾಗದಲ್ಲಿ ವಿಸ್ತಾರವಾದ ರಂಗಮಂಟಪವಿದ್ದು ಅದು ಆಧುನಿಕವಾಗಿದೆ. ಈ ವೀರಭದ್ರೇಶ್ವರ ದೇವಾಲಯದಲ್ಲಿ ಪ್ರತಿ ವರ್ಷ ಜನವರಿಯಲ್ಲಿ ದೊಡ್ಡ ಪ್ರಯಾಣದ ಜಾತ್ರೆಯಾಗುತ್ತದೆ. ಇದರ ಪ್ರಾಚೀನ ಹೆಸರು ಜಯಸಿಂಗ ನಗರ ಇದು ಪೇಶ್ವೆಯವರ ಅಧೀನದಲ್ಲಿತ್ತು. ಚಂದ್ರಸೇನ ಜಾಥವನು ಈ ನಗರಕ್ಕೆ ಜಯಸಿಂಹನಗರವೆಂದು ನಾಮಕರಣ ಮಾಡಿದುದಾಗಿ ತಿಳಿದು ಬರುತ್ತದೆ. 1725 ರ ಸುಮಾರಿಗೆ ಇಲ್ಲಿ ಈ ವೀರಭದ್ರೇಶ್ವರ ದೇವಾಲಯ ನಿರ್ಮಾಣವಾಯಿತು.

ತ್ರಿಕೂಟ ಗರ್ಭಾಗ್ರಹಗಳ ಮಾದರಿಯಲ್ಲಿರುವ ಇದರ ಮಧ್ಯ ಗರ್ಭ ಗೃಹದಲ್ಲಿ ಶ್ರೀ ವೀರಭದ್ರೇಶ್ವರ ಮೂರ್ತಿ ಅದರ ಎಡಗಡೆಯ ಗೃಹದಲ್ಲಿ ಭದ್ರ ಕಾಳಿಯ ಮೂರ್ತಿ. ಬಲಗಡೆಯ ಗರ್ಭಗುಡಯಲ್ಲಿ ನಂದೀಶ್ವರನ ವಿಗ್ರಹಗಳಿವೆ. ತ್ರಿಕೋಟ ಗೃಹಗಳ ಮುಂದೆ 4 ಕಲ್ಲಿನ ಕಂಬಗಳ ಮೇಲೆ ಕಲ್ಲಿನ ಭೋದಿಗೆ ತೊಲೆಗಳನ್ನು ಹಾಕಿ ನಿರ್ಮಿಸಿದ ಮೇಲ್ಚಾವಣಿಯಿದ್ದು ಅದು ಸುಕನಾಸಿಯೆನಿಸಿದೆ. ಸು; 3 ಅಡಿಗಳ ಪ್ರದಕ್ಷಿಣ ಪಥವನ್ನು ದೇವಾಲಯದ ಎತ್ತರದ ವೇದಿಕೆಗನುಗುಣವಾಗಿ ರಚಿಸಿದ್ದು, ಮುಂಭಾಗದಲ್ಲಿ ಮುಖ ಮಂಟಪವಿದೆ. 16 ಕಂಬಗಳ ಈ ಪ್ರಾಚೀನ ಮಂಟಪದ ಮಧ್ಯದಲ್ಲಿ ವೀರಭದ್ರೇಶ್ವರನ ಮೂರ್ತಿಯ ಎದುರಿಗೆ ದೊಡ್ಡ ಗಾತ್ರದ ನಂದಿ ವಿಗ್ರಹವಿದ್ದು, ಭವ್ಯ-ಸುಂದರತೆಗೆ ಸಾಕ್ಷಿಯಾಗಿದೆ. ದೇವಾಲಯದ ಶಿಖರವು ಹೊಯ್ಸಳ ಮಾದರಿಯಲ್ಲಿದ್ದು ಶಿಖರದ ಸುತ್ತಲು ಶಿವನ ಇಪ್ಪತ್ತೆಂಟು ಲಿಲೆಗಳನ್ನು ವಿಷ್ಣುವಿನ ದಶಾವತಾರದ ಕಥೆಗಳನ್ನು ಹಲವಾರು ಪೌರಾಣಿಕ ಚಿತ್ರಗಳನ್ನು ಅಲ್ಲಿ ಮೂರ್ತಿಗಳ ರೂಪದಲ್ಲಿ ಮೂಡಿಸಲಾಗಿದೆ. ಹಲವು ಬಣ್ಣಗಳನ್ನು ಅವುಗಳಿಗೆ ಅಳವಡಿಸಿರುವುದರಿಂದ ನೋಟಕ್ಕೆ ಅದು ಸೊಗಸನ್ನುಂಟು ಮಾಡುತ್ತದೆ. ಭವ್ಯವಾದ 2 ಮಹಾದ್ವಾರಗಳಿದ್ದು, ಒಂದು ಪೂರ್ವಕ್ಕೂ ಇನ್ನೊಂದು ದಕ್ಷಿಣ ದಿಕ್ಕಿಗೂ ಇವೆ. ಪೂರ್ವದ್ವಾರದ ಹೊರಗೋಡೆಯ ಮೇಲೆ ಕೆಲವು ಶಿಲ್ಪಾಕೃತಿಗಳು ಅಲಂಕಾರಿಕ ಪಟ್ಟಿಕೆಗಳಿದ್ದು ಒಮ್ಮೆಲೆ ಗಮನ ಸೆಳೆಯುತ್ತವೆ. ಈ ದ್ವಾರದ ಒಳಭಾಗದಲ್ಲಿರುವ ಮೂಲು ಕೌಂಬಗಳಲ್ಲಿ ಒಂದು ಅಲುಗಿಸಿದಾಕ್ಷಣ ಅಲುಗಾಡುತ್ತಿರುವುದು ನವೀನ ತಂತ್ರಗಾರಿಕೆಯನ್ನು ತೋರುತ್ತಿದೆ.

ದೇವಾಲಯ ಬಲಬದಿಯಲ್ಲಿ ಒಂದು ಆಳವಾದ ಹೊಂಡವಿದ್ದು ಅದರ ಸುತ್ತಲು ಒಳ ಪ್ರವೇಶಕ್ಕಾಗಿ ಸೊಗಸಾದ ಪಾವಟಿಕೆಗಳನ್ನು ಕಟ್ಟಲಾಗಿದೆ. ಅವು ಕೂಡ ಆ ಜನರ ಕಟ್ಟಡದ ಶೈಲಿ. ಸುಂದರತೆಯ ಪ್ರತೀಕಗಳಾಗಿವೆ. ಒಟ್ಟಿನಲ್ಲಿ ಅಂದಿನ ವಾಸ್ತು ಕೃತಿಯ ಶ್ರೇಷ್ಠ ಕಲೆಯಾಗಿರುವ ಈ

ದೇವಾಲಯವು ನಂತರದ ಎಷ್ಟೋ ದೇವಾಲಯಗಳಿಗೆ ಮಾದರಿಯಾಗಿದೆ ಎಂಬುದನ್ನು ಹಲವು ಊರುಗಳಲ್ಲಿಯ ಆಲಯಗಳಿಂದ ತಿಳಿಯಬಹುದು. ಹೆಚ್ಚು ಕಡಿಮೆ ಇದೆ ಮಾದರಿಯ ಕಟ್ಟಡವೆನಿಸುವ ಬಕ್ಕಪ್ರಭುಗಳ ಮಠವು ಕರಕನಹಳ್ಳಿಯಲ್ಲಿದೆ.

## ಆಧಾರ ಗ್ರಂಥಗಳು


1. ಬೀದರ ಜಿಲ್ಲಾ ಸಾಂಸ್ಕೃತಿಕ ಅಧ್ಯಯನ - ಬಸವರಾಜ ಸರಬರದ.
2. ಬೀಧರ ಜಿಲ್ಲಾದರ್ಶನ ಡಾ|| ಜಗನ್ನಾಥ ಹೆಬ್ಬಾಳೆ - (ಬೀದರ ಜಿಲ್ಲಾ ಸಾಹಿತ್ಯ ಪರಿಷತ್ತು.)

# ಬೀದರ ಕೋಟೆ

ದೇಶದ ಪ್ರಸಿದ್ಧ ಕೋಟೆಗಳಲ್ಲಿ ಬೀದರ ಕೋಟೆಯೂ ಒಂದು. ಇದು ಅತ್ಯಂತ ಬೃಹತ್ತಾಗಿದೆ. ಕೋಟೆಯ ಹೊರಸುತ್ತಳತೆ ಸುಮಾರು 4 ಕಿ.ಮಿ. ಗಳಷ್ಟಿದ್ದು ದೊಡ್ಡ ಕಲ್ಲುಗಳ ಭದ್ರ ಬುನಾದಿಯ ಮೇಲೆ ಇಂದಿಗೂ ಹೆಚ್ಚಿನ ಭಗ್ನತೆ ಹೊಂದಿದೆ. ಬಹಮನಿ ರಾಜ್ಯದ ಸುಲ್ತಾನ ಅಹಮ್ಮದಶಹ 1428ರಲ್ಲಿ ಬೀದರನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡ. ಅದೇ ಕಾಲಕ್ಕೆ ಈ ಸುಲ್ತಾನ ಬೀದರ ಕೋಟೆಯನ್ನು ಕಟ್ಟಿಸಿದ ಆದರೆ ಇತ್ತ ಕೋಟೆ ಕಟ್ಟುವ ಮುಂಚೆ ಇಲ್ಲಿ ಕಾಕತೀಯರಿದ್ದರು. ಇವರು ಮೂದಲೆ ಪುರಾಣಖಿಲಾ ಅಥವಾ ಹಳೆಯ ಕೋಟೆ ಕಟ್ಟಿದರು. ಅರಸ ಭೀಮಸಿಂಗ ಇದ್ದನು. ಇತ್ತನ ನಂತರ ರುದ್ರಮ್ಮ ಆಳಿದಳು. ಇವರು ಹಿಂದುಗಳಾಗಿದರು.

ಮಹಮ್ಮದ ಬೀನತುಗಲಕನ್ನು ಕಾರ್ಕತೀಯರಿಂದ ಬೀದರನು ವಶಪಡಿಸಿಕೊಂಡು ಇಲೊಂದು ಸೈನ್ಯದ ನೆಲೆಯನ್ನು ಸ್ಥಾಪಿಸಿದ. ನಂತರ ಅಹಮ್ಮದಶಾಹನು ರಾಜ್ಯಧಾನಿ ಗುಲ್ಬರ್ಗಾದಿಂದ ಬೀದರಗೆ ವರ್ಗಾಯಿಸಿದ ನಂತರ ಹೊಸದಾಗಿ ಅರಮನೆಗಳು ಮಹಲಗಳು ಕೋಟೆ. ಅವರಣಗಳು ನಿರ್ಮಾಣಗೊಂಡವು. ವಿಭಿನ್ನ ದೇಶದ ಎಂಜಿನಿಯರುಗಳನ್ನು ಹಾಗೂ ಶಿಲ್ಪಿಗಳನ್ನು ಈ ಕೋಟೆಯ ನಿರ್ಮಾಣ ಕಾರ್ಯದಲ್ಲಿ ತೊಡಗಿಸಲಾಗಿತ್ತೆಂಬ ಉಲ್ಲೇಖವಿದೆ. ಕೋಟೆಯ ಪ್ರಮುಖ ದ್ವಾರ ದಕ್ಷಿಣ ಪೂರ್ವ ಮದ್ಯವಿದ್ದು ಅಂಕುಡೊಂಕಾದ ಮಾರ್ಗದ ಮಧ್ಯ ಮತ್ತೆ ಮೂರು ಪ್ರವೇಶ ದ್ವಾರಗಳಿವೆ ಕೋಟೆಯ ಕೆಲ ಒಳಭಾಗಗಳಲ್ಲಿ ಮೂಡಿಸಲಾದ ವರ್ಣರಂಜಿತ ಕಲೆಯನ್ನು ಈಗಲೂ ನೋಡಬಹುದಾಗಿದೆ. ತಖ್ತಮಹಲ, ಟರ್ಕಶ ಮಹಲ, ಗಗನಮಹಲ್, ರಂಗಿನ ಮಹಲ್, ಸಭಾಸದನ ಟಂಕಸಾಲೆ, ಆಯುಧ ಶಾಲೆ, ಸ್ನಾನಗಗೃಹಗಳು ಕೋಟೆಯಲ್ಲಿ ಕಾಣಸುವ ಅವಶೇಷಗಳಾಗಿವೆ. ಕೋಟೆಯ ಒಳಭಾಗದಲ್ಲಿ ಸುಮಾರು ಮೂವತ್ತೇಳು ಬರುಜ (ಕೊತ್ತಲು) ಗಳಿವೆ. ಅಲ್ಲಲ್ಲಿ. ದೊಡ್ಡ ದೊಡ್ಡ ತೋಪುಗಳು ನೀಡಲಾಗಿದೆ. ಅವುಗಳ ಮೇಲೆ ಅವುಗಳ ಉತ್ಪಾದಕರ ಹೆಸರುಗಳೂ ಇವೆ.ಕೋಟೆಯಲ್ಲಿ ವೀರಸಂಗಯ್ಯನ ಸ್ಮಾರಕ ಮತ್ತು ಭವಾನಿ ಮಂದಿರಗಳಿವೆ. ಈ ಕೋಟೆಯಲ್ಲಿ ಅನೇಕ ಐತಿಹ್ಯ ಸ್ಥಳಗಳಿವೆ.

ಬಹಮನಿ ಆಳ್ವಿಕೆಯ ಹಂತವು ಕಲೆ ಮತ್ತು ವಾಸ್ತು ಶಿಲ್ಪದ ದೃಷ್ಟಿಯಿಂದ ಮಹತ್ವದಾಗಿದೆ. ಅವರು ಕೋಟೆಯನ್ನು ಪಟ್ಟಣವನ್ನು ಹೆಚ್ಚು ಕಡಿಮೆ ಸಮಾನವಾದ ವಿಸ್ತೀರ್ಣದಲ್ಲಿ ನಿರ್ಮಿಸಿದರು. ಎರಡು ಸುತ್ತಲೂ ಬಲವಾದ ಗೋಡೆಯನ್ನು ಕಟ್ಟಿಸಿದರು. ಕೋಟೆಯನ್ನು ಪಟ್ಟಣ ಸಂಬಂಧಗೊಳಿಸುವ ಎಳು ಬಾಗಿಲುಗಳಿವೆ. ಒಂದನ್ನು ಖರ್ಜಾ ದರ್ವಾಜ ಎಂದು ಕರೆದಿದ್ದಾರೆ. ಅದರ ಮುಂಭಾಗದಲ್ಲಿ ಎರಡು ಹುಲಿಗಳ ಚಿತ್ರವನ್ನು ಕೇತ್ತಿರುವುದೇ ಅದಕ್ಕೆ ಕಾರಣ. ದಕ್ಷಿಣ ಭಾರತದ ಕೋಟೆಗಳಲ್ಲಿಯೇ ರಕ್ಷಣಾ ತಂತ್ರದ ದೃಷ್ಟಿಯಿಂದ ರಚಿತಗೊಂಡ ಕೋಟೆಗಳಲ್ಲಿ ಬೀದರ ಕೋಟೆ ಮಹತ್ವದ ಸ್ಥಾನ ದೊರೆತಿದೆ. ರಕ್ಷಣೆಗಾಗಿ ನಿರ್ಮಿಸಿದ ಕಂದಕಗಳು ವಿಶೇಷವಾಗಿವೆ.

ಅಧಿಕಾರಿಗಳು ನಾಗರಿಕರು ವಾಸಿಸುತ್ತಿದ್ದ ಪ್ರದೇಶಕ್ಕೆ ಬುರುಜ ದ್ವಾರಗಳ ಸಹಿತ ರಕ್ಷಣಾ ಗೋಡೆಯನ್ನು ರಚಿಸಿರುವುದು, ಬೀದರ ಕೋಟೆಯ ವಿಶೇಷಿತವಾಗಿದೆ. ವಿಶೇಷವಾಗಿ ಕೋಟೆಯಲ್ಲಿರುವ ಮಹಲುಗಳು ವಿನ್ಯಾಸ ರಚಿಸಿದವರು ಪರ್ಶಿಯಾದಿಂದ ಬಂದಿದ್ದ ಇಂಜಿನೀಯರಗಳು ಕಟ್ಟಡ ನಿರ್ಮಾಣ ಕಾರ್ಯದಲ್ಲಿಪಾಲ್ಗೊಂಡುವರು ಸ್ಥಳೀಯ ಕುಶಲ ಕರ್ಮಿಗಳು ಪರಿಣಾಮವಾಗಿ ಈ ಕಲೆ ಇಂಡೋ ಪಾರ್ಶಿಕ ಕಲೆಯಾಗಿ ಮಾರ್ಪಟ್ಟಿದೆ.

## ಬೀದರ ಕೋಟೆಯ ಮಹಾದ್ವಾರ

ಕೋಟೆಯ ಪ್ರಥಮ ದ್ವಾರವನ್ನು ದಾಟಿ ಸಾಗುವಾಗ ಮತ್ತೊಂದು ಸುಂದರವಾದ ದ್ವಾರ ದೊರಕುವುದು. ಅದಕ್ಕೆ ಖರ್ಜಾದರ್ವಾಜ ಎಂದು ಕರೆಯುತ್ತಾರೆ. ಈ ದ್ವಾರಕ್ಕೆ ಕಮಾನಿನ ಮೇಲೆ ಎಡಕ್ಕ ಬಲಕ್ಕ ಹುಲಿಗಳ ಶಿಲ್ಪ ಚಿತ್ರಗಳಿವೆ. ಇದರಿಂದಾಗಿ ಇದಕ್ಕೆ ಖರ್ಜಾದರ್ವಾಜ ಎಂಬುದಾಗಿ ಹೆಸರು ಬಂದಿದೆ. ಇದರ ರಚನೆಯಾದದ್ದು 1503 ರಲ್ಲಿ ಖರ್ಜಾ ದರವಾಜದ ಎದುರಿನ ಕೋಟೆಯ ಮೇಲ್ಭಾಗದಲ್ಲಿ ಬಣ್ಣದ ಟೈಲ್ಸಗಳ ಅಲಂಕಾರ ಕಾಣಬಹುದಾಗಿದೆ. ಈ ದರವಾಜದ ಮೇಲೆ ಸುಂದರ ರಚನೆಯ ಹಜಾರ ಹೊಂದಿದೆ. ಅದಕ್ಕೆ ಸಬಾತಖಾನ ಎಂದು ಹೆಸರು ಅದರೊಳಗೆ ವಾದ್ಯ ನುಡಿಸುವವರು ಕುಳಿತುಕೊಂಡು ಆಯಾ ಸಮಯದಲ್ಲಿ ನಿಗದಿತ ವಾದ್ಯ ಸಂಗೀತವನ್ನು ನುಡಿಸುತ್ತಿದ್ದರು. ಅದರ ಕಿಟಕಿಗಳಿಂದ ಪಶ್ಚಿಮ ದಿಕ್ಕಿನಡೆಗೆ ವಿಕ್ಷಿಸಿದಾಗ ಕಂಡು ಬರುವ ದ್ವಾರವೆ ಗುಂಬಜ ದರ್ವಾಜಾ.

ಕೋಟೆಯ ದ್ವಾರಗಳು ಅತ್ಯಂತ ಭದ್ರವಾಗಿವೆ. ಅತ್ಯಂತ ಭಾರವಾದ ಕಬ್ಬಿಣದ ದ್ವಾರಗಳಿವೆ. ಅತ್ಯಂತ ಎತ್ತರವಾಗಿದೆ. ಈ ದ್ವಾರಗಳನ್ನು ಮನುಷ್ಯರಿಗೆ ಮುಚ್ಚಲು ಬರುತ್ತಿರಲಿಲ್ಲ. ಈ ದ್ವಾರಗಳನ್ನು ಮುಚ್ಚಲು ಆನೆಗಳಿದ್ದವು ಆನೆಗಳೆ ದ್ವಾರ ತೆರೆಯುತ್ತಿದ್ದವು ಹಾಗೂ ಮುಚ್ಚುತ್ತಿದ್ದವು ಎಂದು ಜನರು ಹೇಳುತ್ತಾರೆ. ವೈರಿಗಳು ಕೋಟೆಯ ಒಳಗೆ ನುಗ್ಗ'ಭಾರದೆಂದು ಅತ್ಯಂತ ಭದ್ರವಾದ ಬಾಗಿಲುಗಳು ಮಾಡಿದ್ದಾರೆ ಈ ದೊಡ್ಡದ್ವಾರ ಬಾಗಿಲ ಒಳಗೆ ಚಿಕ್ಕದ್ವಾರದ ವ್ಯವಸ್ಥೆಕುಡು ಮಾಡಿದ್ದಾರೆ. ಒಬ್ಬರು ಇಬ್ಬರು ಹೋಗುವಷ್ಟೆ ಚಿಕ್ಕ ಬಾಗಿಲ ಕೂಡ ಅದರೊಳಗೆ ಮಾಡಿದ್ದಾರೆ.

## ಗುಂಬಜ ದರವಾಜ

ಮಹಾದ್ವಾರದಿಂದ ಕೋಟೆಯ ಒಳಗೆ ಹೋದಾಗ ಅಲ್ಲಿ ಪ್ರಥಮವಾಗಿ ಕಾಣುವದು ಗುಂಬಜ ದರ್ವಾಜ ಕೋಟೆಯ ಸ್ಮಾರಕಳಲ್ಲಿಯೇ ಈ ದ್ವಾರ ತನ್ನದೆ ಆದ ಮಹತ್ವವನ್ನು ಹೊಂದಿದೆ. ಈ ದ್ವಾರದ ಕಮಾನುಗಳು ಉತ್ತರವಾಗಿ ಕಟ್ಟಲಾಗಿದ್ದು ಒಟ್ಟು ಕಮಾನಿನ ಎತ್ತರ 28 ಅಡಿ ಎತ್ತರದ ಕಟ್ಟಡ ಒಟ್ಟಾರೆ 39 ಅಡಿ 8 ಇಂಚುಗಳು ಹೊಂದಿದೆ. ಮೇಲೆ ಗುಂಬಜ ಇರುವುದರಿಂದ ಇದಕ್ಕೆ ಗುಂಬಜ ದರ್ವಾಜ ಎಂದು

ಕರೆಯಲಾಗುತ್ತದೆ. ಈ ದ್ವಾರದ ರಚನೆ ಕ್ರಿ.ಶ. 1429ರ ಮುನ್ನವೆ ಆಗಿರುವುದೆಂದು ಜಿ.ಯಝುದಾನಿಯವರು ಅವರ ಗ್ರಂಥದಲ್ಲಿ ಬರೆದಿರುತ್ತಾರೆ.

ಈ ಗುಂಬಜ ದ್ವಾರವು ಮಹಾದ್ವಾರದಿಂದ ಒಳ ಭಾಗವಿದೆ. ಇದು ನೋಡಲು ತುಂಬಾ ಆಕರ್ಷಕವಾಗಿದೆ. ಆ ಕಾಲದಲ್ಲಿಯ ಕಟ್ಟಡದ ರಚನೆಯ ವ್ಯವಸ್ಥೆಯನ್ನು ಅರಿಯಲು ಅತ್ಯಂತ ಮಹತ್ವದಾಗಿದೆ. ಈ ಗುಂಬಜಕ್ಕೆ ಜನರು ಗುಮ್ಮ ಎಂದು ಕರೆಯುತ್ತಾರೆ. ಏಕೆಂದರೇ ಗುಂಬಜ ಒಳಗಡೆ ನಿಂತು ಒಂದ ಸಾರಿ ಕುಗಿದರೆ ಪ್ರತಿ ಧ್ವನಿ ಕೇಳಿ ಬರುತ್ತದೆ. ಇಂದು ಕೂಡ ಇಲ್ಲಿ ಕುಗಿದರೆ ಧ್ವನಿ ಬಹಳ ಸೋಗಸಾಗಿ ಹೆಚ್ಚಾಗಿ ಚೆನ್ನಾಗಿ ಕೇಳಿ ಬರುತ್ತದೆ. ಇದರ ಒಳಗೆ ಸಂಗೀತ ನುಡಿ ಸುತ್ತಿದರಬಹುದು. ಈ ಗುಂಬಜ ಅತ್ಯಂತ ಸುಂದರವಾದ ಕಲೆಯಿಂದ ಕಟ್ಟಿದ್ದಾರೆ ಮೇಲೆ ಹೂ ಬಳ್ಳಿ ಚಿತ್ರಗಳಿವೆ. ಇಂದು ಕೂಡ ಇದು ಆಕರ್ಷಕವಾದ ಗುಂಬಜ ಆಗಿದೆ. ಈ ಗುಂಬಜ ದ್ವಾರದ ಮಧ್ಯ ದಾರಿಯಲ್ಲಿ ಪಾಂಡುರಂಗನ ಪಾದುಕೆ ಇದೆ. ಇಂದು ಕೂಡ ಈ ಪಾದಕೆ ಜನರು ಇಲ್ಲಿ ಪೂಜೆ ಮಾಡುತ್ತಾರೆ.

## ರಂಗಿನ ಮಹಲ್

ಗುಂಬಜ ದರ್ವಾಜ ಆದನಂತರ ಇದಕ್ಕೆ ಹೊಂದಿಕೊಂಡಂತೆ ಒಳಗೆ ಎಡಬದಿಗೆ ಚಿಕ್ಕದಾದ ಮಹಲ್‌ವೊಂದಿದ್ದು ಅದಕ್ಕೆ ರಂಗಿನ ಮಹಲ ಎಂದು ಕರೆಯುತ್ತಾರೆ. ಈ ರಂಗಿನ ಮಹಲನ್ನು 3ನೇ ಘಿಯಾಸುದ್ದಿನನು 1463-1482 ರಲ್ಲಿ ನಿರ್ಮಿಸಿದ್ದಾನೆ. ಇದು ಕೋಟೆಯಲ್ಲಿ ಇರುವ ಎಲ್ಲಾ ಮಹಲ್ ಮತ್ತು ಕಟ್ಟಡಗಳಿಗಿಂತ ಅತ್ಯಂತ ಸುಂದರ ಹಾಗೂ ಆಕರ್ಷಕವಾದ ಮನೋಹರವಾದ ಕಟ್ಟಡ ಇದಾಗಿದೆ. ರಂಗಿನ ಮಹಲ್ ಒಳಗಡೆ ಸುಂದರವಾದ ಚಿತ್ರ ಕಲೆಗಳಿಂದ ನಿರ್ಮಾಣ ಶಿಲ್ಪ ಕಲೆ ಮತ್ತು ಚಿತ್ರಗಳಿವೆ.

ಈ ರಂಗಿನ ಮಹಲಕ ನೃತ್ಯ ಭವನವೆಂದು ಕರೆಯುತ್ತಾರೆ. ಹಾಗೂ ರಂಗಿನ ಮಹಲ್ ಒಳಗಡೆ ಇರುವ ಶಿಲ್ಪಗಳು ಇರಾನಿನ ಕುಶಲ ಶಿಲ್ಪಿಗಳ ಮೂಲಕ ಚಿನ್ನ ಮತ್ತು ಬೆಳ್ಳಿ ಕಪ್ಪೆ ಚಿಪ್ಪಿನ ಪಿಂಗಾಣೆ ಬಳಕೆಯಿಂದ ವರ್ಣಮಯ ಮಹಲ್ ಕಟ್ಟಿಸಲಾಗಿದೆ 500 ವರ್ಷಗಳು ಕಳೆದರು ಈ ಮಹಲನಲ್ಲಿನ ಶಿಲ್ಪಕಲೆಯ ಬಣ್ಣವು ಇನ್ನು ಹೊಸದಾಗಿದೆ.

ಇಲ್ಲಿ ಪ್ರಥಮ ಬಾರಿಗೆ ಬಿದ್ರಿಕಲೆ ಉಪಯೋಗಿಸಿ ಆ ಕಲೆಯು ವಿಶ್ವದಾದ್ಯಂತ ಪ್ರಸಿದ್ದಯನ್ನು ಪಡೆದಿದೆ. ಇದರ ಮುಖ್ಯ ದ್ವಾರ ತುಂಬ ಬಣ್ಣಗಳಿಂದ ಕೂಡಿದೆ. ಸಮುದ್ರ ಸಿಂಪಿನ 9 ಬಣ್ಣಗಳು ಉಪಯೋಗಿಸಲಾಗಿದೆ. ರಂಗಿನ ಮಹಲ್‌ನಲ್ಲಿ ಸುಂದರ ಮತ್ತು ಅತ್ಯಂತ ಸೂಕ್ಷ್ಮವಾದ ಕಟ್ಟಿಗೆಯ ಮೇಲೆ ಚಿತ್ರಕಲೆಯನ್ನು ಒಳ್ಳೆಯ ಕಲಾತ್ಮಕವಾದ ರೀತಿಯಲ್ಲಿ ತೆಗೆಯಲಾಗಿದೆ.

ರಂಗಿನ ಮಹಲಿನಲ್ಲಿ ಅನೇಕ ಸಣ್ಣ ಸಣ್ಣ ಕೋಣೆಗಳಿವೆ.ಅವುಗಳ ಸುಂದರ ಬಿದ್ರಿ ಹಾಗೂ ಶಿಲ್ಪ ಕಲೆಗಳ ಬಳಕೆ ಮಾಡಲಾಗಿದ ಅರಮನೆಯ ಮೇಲ್ಭಾಗದಲ್ಲಿ ಸುಂದರವಾದ ಹೂವಿನ ಚಿತ್ರಗಳು ಅದರಲ್ಲಿ

ಬಣ್ಣ ತುಂಬಿದ್ದರಿಂದ ಆಕರ್ಷಿತವಾಗಿದೆ ಅಲ್ಲದೆ ಹೊರಭಾಗದ ಗೋಡೆಗಳ ಮೇಲೆ ಕೆಲವು ಚಿತ್ರಗಳನ್ನು ಕೆತ್ತಲಾಗಿದೆ. ಮಹಲಿನ ಹೊರಗಡೆ ಕಲ್ಲಿನ ಹೌಜಗಳಿವೆ. ಆ ಹೌಜಗಳಲ್ಲಿ ಸುವಾಸನೆ ಭರಿತ ಇತರ ಹಾಕುತ್ತಿದ್ದರು ಎಂದು ಹೇಳಲಾಗಿದೆ.

ಬಣ್ಣ ಬಣ್ಣದ ಅಲಂಕಾರಗಳಿಂದ ಕೂಡಿರುವ ರಂಗಿನ ಮಹಲು ಮರದ ಸುಂದರವಾದ ನಾಜೂಕಿನ ಕೆತ್ತನೆ ಚಿತ್ರಣಗಳಿಂದ ಆವೃತ್ತಗೊಂಡು ಮುತ್ತಿನ ಚಿಪ್ಪುಗಳಿಂದ ಶೃಂಗಾರಗೊಂಡಿದೆ. ಅದರಲ್ಲಿ ವಿಸ್ತಾರತೆ ಮತ್ತು ಭವ್ಯತೆಯ ಅಭಾವ ಎದ್ದು ತೋರುತ್ತದೆ. ಅಹಮ್ಮದ ಶಾಹ ಬಹಮನಿ ನಿರ್ಮಾಣ ಮಾಡಿದರೆ ಅದಕ್ಕೆ ಅಲಿ ಬರೀದಿ ಶಾ ಪ್ರಗತಿ ಮಾಡಿದನು.

## ರಾಜರ ಅಡುಗೆ ಮನೆ

ರಂಗಿನ ಮಹಲ್ಲಿಗೆ ಮಶ್ಚಿಮ ದಿಶೆಯಲ್ಲಿ ಇರುವ ಕಟ್ಟಡದ ಹೆಸರು ರಾಜನ ಅಡುಗೆ ಮನೆ ಆ ಮೇಲೆ ಇದನ್ನು ಕಾರಗೃಹವಾಗಿ ಬಳಸಲಾಗುತ್ತಿತ್ತು. ಬಹಮನಿಯ ಕಾಲದ ಈ ಕಟ್ಟಡವನ್ನು ಅನೇಕ ಸಲ ಪುನರ ರಚಿಸಿದಂತಿದೆ.

## ಅರಸರ ಸ್ನಾದ ಗೃಹ (ಶಾಹಿ ಹಮಾಮ ಶಾನ)

ಇಂದು ಈ ಶಾಹಿ ಹಮಾಮ ಶಾನವನ್ನು ಪುರಾತತ್ವ ಇಲಾಖೆಯವರ ಕಛೇರಿ ಹಾಗೂ ವಸ್ತು ಸಂಗ್ರಹಾಲಯಗಳಿವೆ. ಈ ಪ್ರದೇಶದ ವಿವಿದೆಡೆಗಳಲ್ಲಿ ದೊರೆತಿರುವ ಐತಿಹಾಸಿಕ ಮಹತ್ವದ ಶಿಲ್ಪ ಆಯುಧ ಮುಂತಾದವುಗಳನ್ನು ಸಂಗ್ರಹಿಸಿ ಪ್ರದರ್ಶನಕ್ಕೆಂದು ಇಡಲಾಯಿತು. ಆದರೆ ಮೊದಲಿಗೆ ಈ ಕಟ್ಟಡದ ಬಳಕೆ ಆಗುತ್ತಿದ್ದುದನ್ನು ಅರಸರ ಸ್ನಾನಕ್ಕೆಂದು ಈ ಕಟ್ಟಡಕ್ಕೆ ಹೊಂದಿಕೊಂಡಂತೆ ಈಜುಕೊಳವಿದೆ. ಸ್ನಾನಕ್ಕೆಂದು ಈ ವಿವಿಧ ಕೋಣೆಗಳು ಇದರ ಒಳಗಡೆ ಇದೆ.

## ಬಂದಿಖಾನೆ

ಇದು ಕೋಟೆಯ ಒಳಭಾಗದಲ್ಲಿದೆ. ಇಂದು ಬಂದಿಖಾನೆಯನ್ನು ಮುಚ್ಚಿ ಕೀಲಿಕೈಯನ್ನು ಹಾಕಲಾಗಿದೆ. ಅದರ ಒಳಗಡೆ ಹೋಗಲು ಅವಕಾಶವಿಲ್ಲ. ಆದರೆ ರಾಜರ ಕಾಲದಲ್ಲಿ ಅಂದೊಂದು ಬಹುದೊಡ್ಡ ಬಂದಿಖಾನೆಯಾಗಿತ್ತು. ಆ ಬಂಧಿಕಾನೆಯಲ್ಲಿ ಶತ್ರುಗಳನ್ನು ಅಪರಾಧಿಗಳನ್ನು ದ್ರೋಹಿಗಳನ್ನು ಇಡಲಾಗುತ್ತಿತ್ತು. ಅಲ್ಲಿದ್ದ ಜನರಿಗೆ ಬಂಧಿಖಾನೆಯನ್ನು ನೋಡಲು ಸಿಪಾಯಿಗಳು ಇರುತ್ತಿದ್ದರು. ಬಂದಿಖಾನೆ ಕೋಣೆಗಳು ಕತ್ತಲೆಯ ಕೋಣೆಗಳಾಗಿದ್ದವು ಎಂದು ಹೇಳಲಾಗಿದೆ.

## ದಿವಾನ್. ಇ. ಎಮ್. ಹಾಲ್

ಸೋಲ್ಹ ಕಂಬದ ಮಜೀದ ಹಿಂದಿನ ಪರಿಸರದಲ್ಲಿರುವ ಈ ಕಟ್ಟಡದ ಅವಶೇಷ ಒಂದು ಕಾಲದಲ್ಲಿ ಭವ್ಯವಾದ ಅರಸರ ಸಭಾ ಮಂಟಪ ಆಗಿತ್ತು. ಇದರಲ್ಲಿ ಬಹಮನಿ ಅರಸ ಕೂತುಕೊಂಡು ಜನರ ಸಮಸ್ಯೆ, ತೊಂದರೆ, ಕಷ್ಟ ಇತ್ಯಾದಿ ಏನೆ ಇರಲಿ ಇದರಲ್ಲಿ ಜನರ ಜೋತೆಯಲ್ಲಿ ಮಾತಾಡುತ್ತ ಅವರ ಸಮಸ್ಯ ಬಗೆ ಹರಿಸುತ್ತಿದ್ದ ಜನರ ಸಮಸ್ಯೆ ಕೇಳುತ್ತಿದ್ದ. ಜನರ ಜೋತೆ ಚರ್ಚೆ ಮಾಡುತ್ತಿದ್ದ. ಹಾಗೂ ಮಾಂಡಲಿಕರು ಅಧೀನರು ಅರಸರಿಗೆ ಕಪ್ಪ ಕಾಣಿಕೆಗಳನ್ನು ಸಲ್ಲಿಸುತ್ತಿದ್ದರು.

ಇದರ ಗೋಡೆಗಳು ಒಂದು ತಕಣಿ ಟೈಲ್ಸಗಳಿಂದ ಅಲಂಕೃತಗೊಂಡಿದ್ದವು. ಈ ಕಟ್ಟಡವು ಈಗ ಸಂಪೂರ್ಣವಾಗಿ ನಾಶವಾಗಿದೆ ಎಂದು ಹೇಳಲಾಗಿದೆ. ಕೇವಲ ಅವಶೇಷಗಳು ಗತವೈಭವದ ನೆನಪು ಮಾತ್ರ ಉಳದಿವೆ.

## ಸೋಲ್ಹಾಕಂಬ ಮಜೀದ

ಹೆಸರೇ ಸುಚಿಸುವಂತೆ ಸೋಲಾಹ ಎಂದರೆ 16 : 16 ಕಂಬಗಳಿಂದ ಕೂಡಿದ ಮಜೀದಿಯಾಗಿದೆ. ಆದರಿಂದ ಇದನ್ನು ಸೋಲ್ಹಾ ಕಂಬ ಎಂದು ಕರೆಯುತ್ತಾರೆ.

ಮೊದಲು ಈ ಸೋಲ್ಹಾ ಕಂಬದಲ್ಲಿ ಮುಸ್ಲಿಂರು ನಮಾಜ ಮಾಡುತ್ತಿದ್ದರೆಂದು ಹೇಳಲಾಗಿದೆ. ಆದರೆ ಇಂದು ಕೇಂದ್ರ ಸರಕಾರದ ಅಧೀನವಾಗಿದೆ. ಆದ್ದರಿಂದ ಇಲ್ಲಿ ನಮಾಜ ಮಾಡುವುದು ಸ್ಥಗೀತಗೊಳಿಸಲಾಗಿದೆ.

ಉತ್ತರದಿಂದ ದಕ್ಷಿಣಕ್ಕೆ ಇದರ ಉದ್ದಳತೆ 310 ಅಡಿ ಎತ್ತರ, 28 ಅಡಿ 6 ಇಂಚು ಮಧ್ಯದಲ್ಲೊಂದು ಹಾಲ್ ಇದ್ದು, ಮೇಲೆ ಗುಂಬಜವಿದೆ. ಈ ಪಡಸಾಲಿಯಲ್ಲಿಯೂ ಕೂಡ ನಾವು ಕಂಬಗಳನ್ನು ನೋಡಬಹುದು. ಇದರ ರಚನೆಯು 1423-24 ರಲ್ಲಿ ಆಗಿದೆ. ಪ್ರಮುಖ ಕೋಟೆ ರಚನೆಗಿಂತ ಮೊದಲಿಗೆ ರಚಿತಗೊಂಡಿದ್ದು. ಇದರ ಕಂಬಗಳು ಹಾಗೂ ಕಮಾನಗಳ ರಚನೆಯು ಗಂಭೀರ ಹಾಗೂ ಸುಂದರವಾಗಿದೆ. ಈ ಕಟ್ಟಡದ ಒಳಗೆ ಗಾಳಿ ಬೆಳಕು ಸುಗಮವಾಗಿ ಸಂಚರಿತಗೋಳುತ್ತದೆ. ಮಜೀದಿಯ ಎದುರಿನಲ್ಲಿಯೇ ಉದ್ಯಾನವನ ನೋಡಬಹುದು.

ಈ ಸೊಲ್ಹಾ ಕಂಬಗಳು ಒಂದೇ ಆಕಾರದಲ್ಲಿವೆ. ಅತ್ಯಂತ ಸುಂದರವಾದ ಕಮಾನಗಳಿಂದ ಕೂಡಿವೆ. ಈ ಕಂಬಗಳ ಮೇಲೆ ಅತ್ಯಂತ ಸುಂದರವಾದ ಕಲೆ ಇದೆ. ಸೋಲ್ಹಾ ಕಂಬದ ಕಟ್ಟಡದ ರಚನೆ ಆಶ್ಚರ್ಯ ಮುಡಿಸುತ್ತದೆ. ಇದನ್ನು ವಿಕ್ಷಿಸಲು ಜನರು ಅನೇಕ ಕಡೆಯಿಂದ ಬರುತ್ತಾರೆ. ಸೋಲ್ಹಾಕಂಬ ನೋಡಲು ಅತ್ಯಂತ ಸುಂದರವಾದ ಸ್ಥಳವಾಗಿದೆ.

## ಗಗನ ಮಹಲ ಹಾಗೂ ತರ್ಕಶ ಮಹಲ್

ಮಜೀದಿಯ ಕಟ್ಟಡಕ್ಕೆ ಹೊಂದಿಕೊಂಡಂತೆ ದಕ್ಷಿಣದೆಡೆಗೆ ವಿವಿಧ ಕಟ್ಟಡಗಳ ಸಂಕೀರ್ಣ ಹೊಂದಿದ್ದೆ. ಅಂದ್ದೊಂದು ಬಹು ಮಹಡಿಗಳನ್ನೊಳಗೊಂಡ ಕಟ್ಟಡ ಉತ್ತರದಲ್ಲಿ ಗಗನಕ್ಕೆ ಮುಟ್ಟುವಂತಿದೆ. ಆದರಿಂದ ಇದರ ಹೆಸರು ಗಗನ ಮಹಲ ಎಂದು ಇದೆ. ಜಗತ್ತಿನ ವಿವಿಧ ಕಡೆಗಳಿಂದ ಬಂದ ರಾಣಿಯರು ವಿವಿಧ ಕೋಣೆಗಳಲ್ಲಿ ವಾಸಿಸುತ್ತಿದ್ದರು. ಇದರ ಮತ್ತೊಂದು ಹೆಸರು ಜನಾನಾ ಮಹಲ ಇದೆ.

ತರ್ಕಶ ಮಹಲ ಇದು ಹುಮಾಯೂನ್ನ ಹೆಂಡತಿಯ ಹೆಸರು ತರ್ಕಶ ಬೇಗಂ, ಆಗಿತ್ತು. ಆದ್ದರಿಂದ ಅವಳ ನೆನಪಿಗಾಗಿ ಈ ತರ್ಕಶ ಮಹಲ ಕಟ್ಟಿಸಿದ. ಇವು ಅತ್ಯಂತ ಸುಂದರವಾದ ಕಲೆಯಿಂದ ಕುಡಿದೆ.

## ರಾಜಭವನ

ಬಹಮನಿಯರ ಕಾಲಕ್ಕೆ ಈ ಕಟ್ಟಡ ಅರಸರ ಪರಿವಾರದ ನಿವಾಸ ಸ್ಥಾನವಾಗಿತ್ತು. ಕೆಲಕಾಲ ಇದರೊಳಗೆ ಸಿಂಹಾಸನ ಕೂಡ ಇರಿಸಲಾಗಿದೆ. ಹಿಗಾಗಿ ಜನರು ಅದನ್ನು ತಕ್ತಮಹಲ ಎಂದು ಕರೆಯುತ್ತಿದ್ದರು. ಈ ಕಟ್ಟಡವು ಇಂದು ಕೂಡ ಭವ್ಯ ಅವಸ್ಥೆಯಲ್ಲಿದೆ. ಒಂದ ಕಾಲದಲ್ಲಿ ಇದು ವೈಭವದಿಂದ ಕೂಡಿದ್ದು. ವಿವಿಧ ರೀತಿಯ ಅಲಂಕಾರಗಳಿಂದ ಶೃಂಗರಿಸಲ್ಪಟ್ಟಿತ್ತು. ಕೆತ್ತನೆಯ ಕೆಲಸ ಟೈಲ್ಸಗಳು ಅಲಂಕಾರದ ಕುರುಹುಗಳನ್ನು ಇಂದಿಗೂ ಕಾಣಬಹುದಾಗಿದೆ. ರಾಜನ ಲಾಂಛನ ಹುಲಿ ಬೇನ್ನಿನ ಮೇಲೆ ಉದಯಿಸುತ್ತಿರುವ ಸೂರ್ಯ ಇದರ ಭವ್ಯ ಚಿತ್ರ ಕಮಾನಿನ ಮೇಲೆ ಕಾಣಿಸುತ್ತದೆ.

## ತೋಪು

ಬೀದರ ಕೋಟೆಯ ಹೊರಗೆ ಬರುವ ಮುನ್ನ ರಂಗಿನ ಮಹಲ್ ಎದುರಿಗೆ ಗುಂಬಜ ದರ್ವಾಜದ ಒಳ ಬದಿಯಲ್ಲಿದ್ದ ಉತ್ತರದೆಡೆಗೆ ಮದ್ದು ಗುಂಡು ತಯಾರಿಸುತ್ತಿದ್ದ ಕಾರ್ಖಾನೆ ಕಟ್ಟಡಕ್ಕಿಂತ ಸ್ವಲ್ಪ ಮುಂದೆ ಸಾಗಿದಾಗ ದೊಡ್ಡ ಗಾತ್ರದ ತೋಪನ್ನು ನೋಡಬಹುದು. ಇದು ದರ್ವಾಜಾದ ಒಳ ಸ್ಥಿತವಾಗಿದೆ. ಈ ತೋಪು ಅಲ್ಲಿ ಬರೀದಶಾಹಿ ಸಾಮ್ರಾಜ್ಯ ಆಳುತ್ತಿದ್ದಾಗ ರಚಿತಗೊಂಡಿದೆ. ಇದರ ಉದ್ದ 14 ಅಡಿ 9 ಇಂಚು ಆಗಿದೆ. ಇದರ ಮೇಲೆ ಪರ್ಶಿಯನ್ ಭಾಷೆಯಲ್ಲಿ ಬರವಣಿಗೆ ಕೂಡ ಕಾಣಬಹುದು. ಈ ತೋಪನ್ನು ತೋಪೆ ಇಲಾಹಿ ಎಂದು ನಮೂದಿಸಲಾಗಿದೆ.

ತೋಪಿನ ಬಳಕೆಯ ಬಗೆಗಿನ ವಿವರಣೆ ಕೂಡ ಅದರಲ್ಲಿ ಬರೆಯಲಾಗಿದೆ. ಒಂದು ತೋಪು ಇದೆ ಅದರ ಹೆಸರು ಕತೆ ತೋಪ ಈ ತೋಪುದಿಂದ ಗುಂಡು ಹಾಕಿದರೆ 2 ಕಿ.ಮೀ. ದೂರ ಹೋಗುತ್ತಿತ್ತು. ಒಂದು ವೇಳೆ ಆ ಗುಂಡು ಊರಲ್ಲಿ ಬಿದ್ದರೆ ಆ ಊರಿನ ಕಚ್ಚಾ ಮನೆಗಳು ಬಿದ್ದು ಬಿಳುತ್ತಿದ್ದವು.

## ಸುರಂಗ ಮಾರ್ಗ (ಗುಪ್ತದ್ವಾರ)

ಇದು ಮುಖ್ಯ ಕೋಣೆಯ ಹಿಂದೆ ಇದೆ. ಇಂತಹ ಅನೇಕ ಸುರಂಗ ಮಾರ್ಗಗಳನ್ನು ನಾವು ಈ ಕೋಟೆಯಲ್ಲಿ ನೋಡಬಹುದು. ಈ ಸುರಂಗ ಮಾರ್ಗಗಳು ಗುಪ್ತ ದ್ವಾರಗಳಾಗಿದ್ದು. ಅವು ಕೋಟೆಯ ಒಳಗಿನಿಂದ ಆರಂಭವಾಗಿ ಬೀದರ ನಗರದ ಹೊರಗೆ ಹೋಗುತ್ತವೆ. ಸುಮಾರು 20-30 ಕಿ.ಮಿ. ಉದ್ದವಾಗಿ ಇರಬಹುದೆಂದು ಅಭಿಪ್ರಾಯ ಪಡಲಾಗಿದೆ.

ಸುರಂಗ ಮಾರ್ಗದಿಂದ ಅನೇಕ ಗುಪ್ತಚಾರರು ಬರುತ್ತಿದ್ದರು. ಅಲ್ಲದೆ ಆರಸರು ಸಹ ಯುದ್ಧ ಸಮಯದ ಸೋಲಿನ ಸಂಭವ ಕಂಡು ಬಂದಲ್ಲಿ ಈ ಮಾರ್ಗದಿಂದ ಓಡಿ ಹೋಗುತ್ತಿದ್ದರು ಎಂದು ಹೇಳಲಾಗಿದೆ. ಈ ಗುಪ್ತ ಮಾರ್ಗವು ಕತ್ತಲೆಯಿಂದ ಕೂಡಿದ್ದ ಚಿಕ್ಕದಾದ ಸುರಂಗ ಮಾರ್ಗವಿದೆ. ಮೂರು ಕಡೆಯಿಂದ ಒಳಗೆ ಹೋಗಲು ದಾರಿ ಇದ್ದು ಅಲ್ಲಿಂದ ಹೋಗಲು ಸಹಾಯಕವಾಗಿವೆ.

ಈ ಸುರಂಗ ಮಾರ್ಗಗಳು ಇಂದು ಸಂಪೂರ್ಣವಾಗಿ ಹಾಳಾಗಿದೆ. ಅದರ ಮೇಲಿನ ಭಾಗವೆಲ್ಲ ಬಿದ್ದು ಹೋಗಿದೆ. ಈಗ ಇಲ್ಲಿ ಚರಂಡಿಯ ನೀರು ಬರುತ್ತವೆಂದು ಜನರು ಹೇಳುತ್ತಾರೆ. ಈ ಸುರಂಗ ಮಾರ್ಗದ ಕಟ್ಟಡ ಸಹ ಒಳ್ಳೆಯ ರೀತಿಯಲ್ಲಿ ಕಲ್ಲಿನಿಂದ ಭದ್ರವಾಗಿ ಕಟ್ಟಲಾಗಿದೆ.

ಸುರಂಗ ಮಾರ್ಗಗಳು ಮುಖ್ಯವಾಗಿ ಹೈದರಾಬಾದ ಚಾರಮಿನಾರ, ಫತ್ತೇಪೂರ, ಮಾಮನಕೆರಿ ಇನ್ನು ಅನೇಕ ಕಡೆಗೆ ಸುರಂಗ ಮಾರ್ಗಗಳಿವೆ ಎಂದು ಜನರ ಹೇಳಿಕೆಯಾಗಿದೆ.

## ಕಂದಕಗಳು

ಕೋಟೆಯ ಸುತ್ತಲು ಈ ಕಂದಕ ಇರುತ್ತದೆ. ಇದು ಏಕೆ ಕಟ್ಟುತ್ತಾರೆ ಎಂದರೆ ವೈರಿಗಳು ಯುದ್ಧ ಮಾಡುವಾಗ ಅಥವಾ ಗುಪ್ತವಾಗಿ ಕೋಟೆಯ ಒಳಗಡೆ ಬರಬಾರದೆಂದು ರಕ್ಷಣೆಗಾಗಿ ಈ ಕಂದಕ ಕಟ್ಟುತ್ತಾರೆ. ಈ ಕಂದಕ ಅತ್ಯಂತ ಆಳವಾಗಿರುತ್ತದೆ. ಇದರ ಒಳಗಡೆ ನೀರು ತುಂಬಿ ಇಡುತ್ತಿದ್ದರು.

ಬಲಭಾಗದಲ್ಲಿ ಕಂದಕದಲ್ಲಿ ರಚಿಸಲಾಗಿರುವ ಕಮಾನ ಆಕೃತಿಯ ಚಿಕ್ಕ ಚಿಕ್ಕ ಕೋಣೆಗಳಲ್ಲಿ ಹುಲಿಗಳನ್ನು ಇಡುತ್ತಿದ್ದರು. ಈ ಹುಲಿಗಳಿಗೆ ಆಹಾರವನ್ನು ಕೂಡದೆ ಇರಿಸುತ್ತಿದ್ದರು. ಇವುಗಳಿಗೆ ಕ್ರೂರ ಶಿಕ್ಷೆಗೆ ಒಳಪಡಿಸಿದ ವ್ಯಕ್ತಿಗಳನ್ನು ನಡುವೆ ನಿಲ್ಲಿಸಿ ಹುಲಿಗಳನ್ನು ಮೇಲೆ ಬೀಡುತ್ತಿದ್ದರೆಂದು ತಿಳಿದು ಬಂದಿದ್ದೆ.

ಕೋಟೆಯ ಸುತ್ತಲು ಈ ತ್ರಿವಳಿ ಕಂದಕಗಳಿದ್ದು ಇವು ಆ ಕಾಲದ ಅರಸರು ತಮ್ಮ ರಕ್ಷಣೆಯ ವಿಷಯದಲ್ಲಿ ತೋರುವ ಜಾಣತನದ ಬಗ್ಗೆ ತಿಳಿಸುತ್ತವೆ. ಈ ಕಂದಕಗಳಲ್ಲಿ ಮೊದಲನೆಯ ಕಂದಕದಲ್ಲಿ ಮೊಸಳೆಯನ್ನು ಎರಡನೆ ಕಂದಕದಲ್ಲಿ ವಿಷಯುಕ್ತ ಹಾವುಗಳನ್ನು ಈ ಎರಡು ಕಂದಕಗಳನ್ನು ದಾಟಿ ಶತ್ರುಗಳು

ಒಳಗೆ ಬಂದಲ್ಲಿ ಮೂರನೇ ಕಂಕದಲ್ಲಿ ಮೇಲಿಂದ ಸಿಪಾಯಿಗಳು ಕಾಯಿಸಿದ ಬಿಸಿ ಬಿಸಿಯಾದ ಎಣ್ಣೆಯನ್ನು ಹಾಕುತ್ತಿದ್ದರೆಂದು ಹೇಳಲಾಗಿದೆ. ಇಂದು ಕೂಡ ಈ ಕಂದಕಗಳಿವೆ ಕೋಟೆಯ ಒಳಗೆ ಯಾರು ಶತ್ರುಗಳು ಬರಲಾರರೆಂದು ಈ ಕಂದಕಗಳು ರಕ್ಷಣೆಗಾಗಿ ಮಾಡಿದರು.

## ಕೋಟೆಯ ಇನ್ನಿತರ ಸ್ಮಾರಕಗಳು

ಕೋಟೆಯ ಒಳ ಭಾಗದಲ್ಲಿ ನಿರ್ಮಾಣವಾಗಿ ಸದ್ಯಕ್ಕೆ ಅವಶೇಷಗಳ ಮೂಲಕ ಪ್ರವಾಸಿಗರನ್ನು ಆಕರ್ಷಿಸುವ ಸಭಾ ಸದನ ಇನ್ನಿತರ ಆಕರ್ಷಕ ಮಹಲಗಳು ಟಂಕಶಾಲೆ ಆಯುಧ ಸಂಗ್ರಹ ಕೋಣೆ ಅನೇಕ ರೀತಿಯಲ್ಲಿ ನಮಗೆ ನೋಡಲು ದೊರಕುತ್ತವೆ ಹಾಗೂ ಉದ್ಯಾನ ವನವಿದೆ.

5.5 ಚ.ಕಿ.ಮೀ. ಬೀದರಿನ ಒಟ್ಟು ವಿಸ್ತಾರವನ್ನು ಹೊಂದಿದೆ. ಹಾಗೂ ಅತಿ ಭದ್ರವಾದ ಕೋಟೆಯಾಗಿದೆ. ಬೀದರಿಗೆ 7 ಪ್ರವೇಶ ದ್ವಾರ ಕಮಾನುಗಳಿವೆ. ಅವು (1) ಸಹ ಗಂಜ ದರ್ವಾಜ (2) ಫತ್ತೆ ದರ್ವಾಜ (2) ಮಂಗಲಪೇಟ ದರ್ವಾಜ 4) ತಳಘಾಟ ದರ್ವಾಜ 5) ದುಲ್ಹನ ದರ್ವಾಜ ಹಾಗೂ ದುಲ್ಹನ ದ್ವಾಜ ಮತ್ತು ಫತ್ತೆ ದರ್ವಾಜ ಇವರೆಡು ಕೂಡವಲ್ಲಿ ಚೌಬಾರ ಕಟ್ಟಿಸಲಾಗಿದೆ. 4 ದಿಕ್ಕುಗಳಿಂದಲೂ ಶತ್ರುಗಳು ಬರುವರೆಂದು ತಿಳಿಯಲು ಹಾಗೂ ಸಮಯ ತಿಳಿಯಲು ಇಲ್ಲಿ ಸೈನಿಕರು ಇರುತ್ತಿದ್ದರೆಂದು ಹೇಳಲಾಗಿದೆ.

## ವಸ್ತು ಸಂಗ್ರಾಹಲಾಯ

ಈ ಸಂಗ್ರಾಹಲಯದಲ್ಲಿ ವಸ್ತುಗಳು ಕೋಟೆಯ ಒಳಗಿನ ಹಾಗೂ ಬೀದರ ಜಿಲ್ಲೆಯ ವಿವಿಧ ಸ್ಥಳದಲ್ಲಿ ಭಾಗಗಳಲ್ಲಿ ದೊರೆತ ವಸ್ತುಗಳಾಗಿವೆ. ಸ್ಮಾರಕಗಳು ಶಾಸನಗಳು ವಸ್ತು ಸಂಗ್ರಾಹಲಯದಲ್ಲಿ ಇಡಲಾಗಿದೆ ಹೇರೊಸ್ಟೋನ್ ಇದು 12.13ನೇ ಶತಮಾನದ ಕಾಲದ ರಾಜರ ಸೇವಕನ ಒಂದು ಕಲ್ಲಿನ ಮೂರ್ತಿಯಾಗಿದೆ. ಇದನು ಮಾಸ್ತಿಗಲ್ಲು ಎಂದಲೂ ಕರೆಯುತ್ತಾರೆ.

**ದರ್ಪಣ ಸುಂದರಿ :** ಕ್ರಿ.ಶ. 12-13ನೇ ಶತಮಾನದಲ್ಲಿ ಈ ದರ್ಪಣದಲ್ಲಿ ಒಬ್ಬ ಮಹಿಳೆಯು ಕನ್ನಡಿಯನು ನೋಡಿಕೊಂಡು ಅಲಂಕಾರ ಮಾಡಿಕೊಳ್ಳುತ್ತಿದ್ದಾಳೆ. ಇದನ್ನು ಒಳ್ಳೆಯ ಕಲಾತ್ಮಕವಾಗಿ ಕೆತ್ತನೆಯನ್ನು ಕೆತ್ತಿ ತೋರಿಸಲಾಗಿದೆ.

**ಶಿವನತಲೆ :** ಇದು ಕೂಡ 12.13 ನೇ ಶತಮಾನದಲ್ಲಿ ಹಿಂದುಗಳು ಸೇವಕರಾಗಿದರು ಆದ್ದರಿಂದ ಎಲ್ಲಾ ಧರ್ಮಕ್ಕೆ ಪ್ರೋತ್ಸಾಹ ಕೋಟಿದರು. ನಟರಾಜನ ಶಿಲ್ಪ ನೋಡಿದರೆ ಆಳ್ವಿಕೆ ಮುಸ್ಲಿಂ ಇದ್ದರು ಎಲ ಹಿಂದುಗಳು ಪಾಲ್ಗೊಂಡಿದ್ದರೆಂದು ತಿಳಿದು ಬರುತ್ತದೆ.

## ಸಂಗೀತ ಮತ್ತು ನೃತ್ಯದ ಭಂಗಿ

ಆ ಕಾಲದ ಸಂಗೀತ ಮತ್ತು ನೃತ್ಯ ಮಾಡುತ್ತಿರುವವರ ಭಂಗಿಯನ್ನು ಕೆತ್ತಲಾಗಿದೆ. ಅನೇಕ ಸ್ತ್ರೀಯರು ನೃತ್ಯ ಮಾಡುತ್ತಿರುವ ಶಿಲ್ಪಕಲೆ ಈ ವಸ್ತು ಸಂಗ್ರಹಲಾಯದಲ್ಲಿವೆ ಹಾಗೂ ಆ ಕಾಲದಲ್ಲಿ ಮಾಡುತ್ತಿರುವ ಯುದ್ಧದ ಬಗೆಯನ್ನು ದೃಶ್ಯದ ಮೂಲಕ ತೋರಿಸಲಾಗಿದೆ.

## ಬಾರುದ್ ಕೋಟಾ

ಬಾರುದ್ ಕೋಟಾದಲ್ಲಿ ಯುದ್ಧದ ಸಾಮಾಗ್ರಿಗಳು ಅಂದರೆ ಬಂದುಕು ಮದ್ದುಗುಂಡು ಇಡುತ್ತಿದ್ದರು.

1. ಮೊಳಕೈಗೆ ಹಾಕುವ ರಕ್ಷಕವಚ
2. ವಿಷಪೂರಿತ ಮದ್ದು ಗುಂಡುಗಳು
3. ತೋಪಿನ ಗುಂಡಗಳು
4. ಮದ್ದು ಗುಂಡು ತಯಾರಿಕೆಗೆ ಬೇಕಾಗುವ ಸಾಮಾಗ್ರಿಗಳು
5. ಕೈದಿಗಳ ಕೈಗೆ ಹಾಕುವ ಬೇಡಿಗಳು
6. ಕತ್ತಿ, ಖಡ್ಗ ಬರ್ಚಿಗಳು
7. ಕೋಟೆ ಬಾಗಿಲಿಗೆ ಹಾಕುವ ಕಿಲಿಗಳು
8. ತಲೆಗೆ ಹಾಕುವ ರಕ್ಷಾ ಕವಚ

## ರಾಜರು ಬಳಸುತ್ತಿದ್ದ ವಿಶೇಷ ತಟ್ಟೆಗಳು :

ರಾಜರುಗಳಿಗೆ ಅನೇಕ ಶತ್ರುಗಳಿದ್ದರು ರಾಜನ ಮುಂದೆ ಚೆನ್ನಾಗಿ ಮಾತನಾಡಿದರು. ಹಿಂದೆ ಅನೇಕ ಕುತಂತ್ರಗಳನ್ನು ಮಾಡುತ್ತಿದ್ದರು ಊಟದಲ್ಲಿ ವಿಷಬೆರಸಿಕೊಡುತ್ತಿದ್ದರಂತೆ ರಾಜರುಗಳು ಅದನ್ನು ಗುರುತಿಸುವುದು ಹೇಗೆ ಗೊತ್ತಾಗಬೇಕೆಂದು ಅವರು ಒಂದು ವಿಶೇಷವಾದ ತತ್ವಗಳನ್ನು ಬಳಸುತ್ತಿದ್ದರು. ಆ ತಟ್ಟೆಯಲ್ಲಿ ವಿಷಪೂರಿತ ಆಹಾರವನ್ನು ಹಾಕಿದ್ದರೆ ಆ ತಟ್ಟೆಯ ಬಣ್ಣವು ಬದಲಾಗುತ್ತಿತ್ತು ಎಂದು ಹೇಳಾಗಿದೆ.

ವಸ್ತು ಸಂಗ್ರಾಹಲಾಯದಲ್ಲಿ ಅನೇಕ ಶಾಸನಗಳಿವೆ ರಾಣಿಯರ ಬಳೆ, ಸರ, ಆಯುಧಗಳು ಅನೇಕ ನೃತ್ಯಗಳು ಕಬ್ಬಿಣ ಕಲ್ಲಿನ ಗುಂಡಗಳು ಕತ್ತಿ ಮುಳು ಇತ್ತರ ಇನ್ನೂ ಅನೇಕ ಸಿಕ್ಕ ವಸ್ತುಗಳು ಪ್ರದರ್ಶನಕ್ಕಾಗಿ ಇಟ್ಟಿದ್ದಾರೆ.

ಕರಿಕಲ್ಲಿನಿಂದ ಕಟ್ಟಿದ ವಿಶಾಲವಾದ ಸುಭದ್ರ ಬೀದರ ಕೋಟೆಯ ಬಹುಭಾಗ ಇನ್ನು ಸುವ್ಯವಸ್ಥಿತವಾಗಿದೆ. ಬಹಮನಿ ಹಾಗೂ ಬರಿದಶಾಹಿ ಆಡಳಿತದಲ್ಲಿ ಸಂಪತ್ತು ಹಾಗೂ ಸಾಂಸ್ಕೃತಿಕ ಹಿರಿಮೆಯಿಂದ ಮೆರೆದ ಬೀದರ ಕೋಟೆ ಪ್ರಮುಖ ಐತಿಹಾಸಿಕ ಅವಶೇಷವಾಗಿ ಉಳಿದಿದೆ.

ಅಹಮ್ಮದಷಾನ ಆಳ್ವಿಕೆಯಲ್ಲಿ ಬೀದರ ನಗರವನ್ನು ಅನೇಕ ಕಟ್ಟಡಗಳಿಂದ ತೋಟಗಳಿಂದ ಮಜೀದಿಗಳಿಂದ ವಿಶಾಲವಾದ ಕೋಟೆಯ ಗೋಡೆಯಿಂದ ಬೀದರನ್ನು ಅಲಂಕೃತವಾದ ನಗರವನ್ನಾಗಿ ಮಾಡಿದ ಶಾಹಿ ಅರಸರ ಕಾಲದಲ್ಲಿ ನಿರ್ಮಾಣಗೊಂಡು ಅನೇಕ ಕಟ್ಟಡಗಳು ಇಂದಿಗೂ ಸುರಕ್ಷಿತವಾಗಿದ್ದು ಪ್ರವಾಸಿಗರ ಕಣ್ಣುಗಳನ್ನು ಕೊರೆಯುವಂತಿದೆ.

ಬೀದರನಲ್ಲಿ ಕಾಕತೀಯರು ನಿರ್ಮಿಸಿದ ಚಿಕ್ಕದಾದ ಕೋಟೆಯನ್ನು ಬಹಮನಿ ವಂಶದ 9ನೇ ಅರಸ ಅಹಮ್ಮದಶಾವಲಿ ಪುನರ ನಿರ್ಮಿಸಿದ (15ನೇ ಪೂರ್ವಾರ್ಧದಲ್ಲಿ) ಐದು ಕಿ.ಮೀ. ವ್ಯಾಪ್ತಿಯನ್ನು ಆವರಿಸಿದ ಈ ಕೋಟೆ ಇಂದಿಗೂ ತನ್ನ ಭದ್ರತೆಯನ್ನು ಉಳಿಸಿ ಕೊಂಡಿದೆ. ಇಡಿ ಭಾರತದಲ್ಲಿ ಅತ್ಯಂತ ಸುವ್ಯವಸ್ಥಿತಿ ಕೋಟೆಗಳಲ್ಲೊಂದು ಎಂಬ ಹೆಗ್ಗಳಿಕೆಯೂ ಇದಕ್ಕಿದೆ ಹಾಗೂ ಇಲ್ಲಿಯ ಕಂದಕಗಳು ಇಡೀ ಭಾರತದಲ್ಲೆ ಇಂತಹ ಕಂದಕಗಳು ಕಂಡು ಬಂದಿಲ್ಲ. ಈ ಕೋಟೆಯ ಮಡಿಲಲ್ಲಿ ಬಹಮನಿಗಳ ಅರಮನೆ ದರ್ಬಾರು ನಡೆಸುವ ದಿವಾನ ಎ. ಆಮಹಾಲ್, ಗಗನಮಹಲ್, ತಕ್ತಮಹಲ ಮುಂತಾದವು ಧ್ವಂಸಗೊಂಡಿವೆ, ಮುತ್ತುರತ್ನ ಮುಂತಾದ ಅಮೂಲ್ಯ ವಸ್ತುಗಳಿಂದ ಅಲಂಕೃತಗೊಂಡಿದ್ದ ಈ ಅರಮನೆಗಳ ಸಮೂಹವನ್ನು ಬಹಮನಿ ಸಾಮ್ರಾಜ್ಯದ ಅವನತಿಯ ಸಂದರ್ಭದಲ್ಲಿ ಮತ್ತೊಬ್ಬರು ತಮ್ಮ ಒಡೆಯರ ಅರಮನೆಗಳನ್ನು ಬಳಸಬಾರದೆಂಬ ಉದ್ದೇಶದಿಂದ ಸೈನಿಕರೆ ಮದ್ದುಗುಂಡುಗಳಿಂದ ಹಾಳು ಮಾಡಿದರು ಎಂದು ಹೇಳಲಾಗುತ್ತದೆ. ಸೋಲ್ಹಾಕಂಬ ಮಜೀದ ಭಾರತದಲ್ಲೆ ಅತ್ಯಂತ ದೊಡ್ಡ ಮಜೀದಿಗಳಲ್ಲೊಂದು.

ಒಂದು ಐತಿಹ್ಯದ ಪ್ರಕಾರ ಇಡೀ ಭಾರತದಲ್ಲೆ ಮೊಟ್ಟ ಮೊದಲ ಬಾರಿಗೆ ಜೇಡಿ ಮಣ್ಣಿನ ರಂಗುರಂಗಿನ ಚಿತ್ರಗಳನ್ನು ಹರಡಿತು ಎಂದು ಹೇಳಲಾಗುತ್ತದೆ. ಜೇಡಿ ಮಣ್ಣಿನ ಬಣ್ಣ ಬಣ್ಣದ ಟೈಲ್ಸಗಳೇ ಈ ರಾಜ್ಯ ಮನೆತನದ ವಾಸ್ತು ಶಿಲ್ಪದ ವೈಶಿಷ್ಟವಾಗಿದೆ. ಆದರೆ ಬರೀದ ಶಾಹಿಗಳು ನಿರ್ಮಿಸಿದ ಸ್ಮಾರಕಗಳು ಇಂದಿಗೂ ಸುಂದರವಾಗಿವೆ. ಕಟ್ಟಡಗಳಲ್ಲಿ ಕಟ್ಟಿಗೆಯನ್ನು ಬಳಕೆಗೆ ತಂದ ರಾಜರು ಇವರು ಪರ್ಷಿಯನ ಮತ್ತು ಭಾರತೀಯ ಕಲೆಯ ಸಮ್ಮೇಳನವಾಗಿರುವ ರಂಗಿನ ಮಹಲ (ಬಣ್ಣದ ಅರಮನೆ) ಇಂದಿಗೂ ತನ್ನ ಮೌಲ್ಯ ಸೌಂದರ್ಯವನ್ನು ಉಳಿಸಿಕೊಂಡಿದೆ. ಮುತ್ತುರತ್ನಗಳು ಬಣ್ಣದ ಚಿತ್ರಕಲೆ. ಕುಸುರಿ ಕಾರ್ಯಗಳು ಇನ್ನೂ ತಮ್ಮ ಗತ ವೈಭವನ್ನು ಸಾರಿ ಹೇಳುತ್ತವೆ. ಕೋಟೆ ಒಳಗಿನ ಗುಮ್ಮಜಗಳನ್ನು ಬಾಂಬ ಇಟ್ಟು ಧ್ವಂಸಗೊಳಿಸಿದರು. ಅವು ಬಾಂಬ ಇಟ್ಟು ಕೆಡವಿದರು ಸ್ವಲ್ಪ ಸಿಡಿಲಿನಿಂದ ಬಿದಿವೆ.

ಕೋಟೆಯ ಒಳಗೆ ವಸ್ತು ಸಂಗ್ರಾಹಲಯ ಹಾಗೂ ಸೋಲ್ಹಾ ಕಂಬದ ಎದುರಗಡೆ ಸುಂದರವಾದ ಉದ್ಯಾನವಿದೆ. ಇದು ನೋಡಲು ಅತ್ಯಂತ ಸುಂದರವಾಗಿದೆ. ಇದು ಪ್ರವಾಸಿಗರ ಮನಸೆಳೆಯುತ್ತದೆ. ಈ ಉದ್ಯಾನದ ಹತ್ತಿರದಲ್ಲೆ ಅನೇಕ ನೃತ್ಯ ಶಿಲೆಗಳಿವೆ. ಅವು ಅಲ್ಪ ಸ್ವಲ್ಪ ಮುರಿದು ಹಾಳಾಗಿವೆ. ಕೋಟೆಯ ಹೊರಗಡೆ ಗೋಡೆಯ ಕಲ್ಲುಗಳ ಮೇಲೆ ಸಾಲಾಗಿ ಆನೆ, ಕುದರೆಗಳನ್ನು ಕೆತ್ತಿದ ಚಿತ್ರಗಳಿವೆ. ಅಹಮ್ಮದನ ಅರಮನೆ ಭೂಮಿಯ ಮೇಲಿನ ಸ್ವರ್ಗವೆಂದು ಪ್ರಸಿದ್ಧಿ ಪಡೆದಿತ್ತು.

# ಬೀದರ ಕೋಟೆ ಸ್ಥಾಪನೆ

ದೆಹಲಿ ಸುಲ್ತಾನ ಮಹಮ್ಮದ ಬಿನ ತುಘಲಕ ಕಾಕತೀಯರಿಂದ ಬೀದರನ್ನು ವಶಪಡಿಸಿಕೊಂಡು ಇಲ್ಲೊಂದು ಸೈನ್ಯದ ನೆಲೆ ಸ್ಥಾಪಿಸಿದ 1341 ರಲ್ಲಿ ಮುಲ್ತಾನಿನ ಸಿಯಾಬುದ್ದಿನ ಎನ್ನುವಾತನಿಗೆ ಈ ಭಾಗವನ್ನು ಪ್ರಾಂತವನ್ನಾಗಿ ಅಧಿಕಾರ ವಹಿಸಿಕೊಟ್ಟ ದಖ್ಖನಿನ್ನ ಸದಾಹ ಅಮೀರರು ತೋಘಲಕನ ವಿರುದ್ಧ ದಂಗೆ ಎದ್ದರು ಅವರುಗಳು ಮೊದಲು ಇಸ್ಮಾಯಿಲ್ ಮುಖ ಶಾಹನು ಗುಲ್ಬರ್ಗವನ್ನು ತನ್ನ ರಾಜ್ಯಧಾನಿಯನ್ನಾಗಿಸಿಕೊಂಡು ಬೀದರ ಪ್ರಾಂತಿಯವಾಗಿತ್ತು. ಬೀದರ ಪಟ್ಟಣ ಹೊಸ ರೀತಿಯಲ್ಲಿ ಬೆಳೆಸಲಾರಂಭಿಸಿದರು.

ಬಹಮನಿಯ ಮನೆತನದ 9ನೇ ಅರಸ ಅಹಮ್ಮದ ಶಾಹನು 1429 ರಲ್ಲಿ ರಾಜ್ಯ ದಾನಿಯನ್ನು ಗುಲ್ಬರ್ಗಾದಿಂದ ಬೀದರಿಗೆ ವರ್ಗಾಯಿಸಿದ. ಅಹಮ್ಮದಶಾಹನು. ಬೀದರ ಕೋಟೆ ಕಟ್ಟಿಸಿದ. ಹೋಸದಾಗಿ ಅರಮನೆಗಳು ಮಹಲಗಳು ಕೋಟೆಯ ಆವರಣ ನಿರ್ಮಾಣ ಮಾಡಿದನು. ಕಿರಮಾನದಿಂದ ಧರ್ಮಗುರು ರಹಮ ತಉಲ್ ಕಿರಮಾನಿ ಬಾಬನವರನ್ನು ಬೀದರಿಗೆ ಬರಮಾಡಿಕೊಂಡ ಈ ಧರ್ಮಗುರುವನ್ನು ನೋಡಲು ಪರ್ಷಿಯಾ, ತುರ್ಕ, ಮುಂತಾದ ಕಡೆಗಳಿಂದ ಜನ ಬೀದರಗೆ ಬರಲಾರಂಬಿಸಿದ್ದರು. ಈ ಧರ್ಮ ಗುರುವಿನ ಮಜೀದ ಇಂದು ಬೀದರ ನಗರದ ಅಷ್ಟೂರ ಗ್ರಾಮ ಚೌಖಂಡಿ ಆಗಿದೆ.

ಅಹಮ್ಮದಶಾಹನ ನಂತರ ಅಲ್ಲಾವುದ್ದಿನ ಅಧಿಕಾರಕ್ಕೆ ಬಂದನು. ಇತನ ನಂತರ ಇವನ ಮಗ ಹುಮಾಯೂನ ಅಧಿಕಾರ ವಹಿಸಿಕೊಂಡ ಇತ್ತನು ಬಹಳ ಕ್ರೂರ ದೊರೆಯಾಗಿದ್ದನ್ನು ಇತನ ಮಂತ್ರಿಯು ಮಹಮ್ಮದ ಗವಾನ. ಹುಮಾಯೂನ ಯಾವಾಗಲು ಕುಡಿದು ಮತ್ತಿನಲ್ಲಿ ಬಿದ್ದಿರುತ್ತಿದ್ದ. ಹುಮಾಯೂನ ಸೇವಕನೋರ್ವನಿಂದ ಕೋಲೆಗಿಡಾದ್ದನು. ನಂತರ ಇವನ ಮಗ ನಿಜಾಂ ಷಾ ಬಂದನು.

ನಿಜಾಂ ಶಾನು ಚಿಕ್ಕವನಾಗಿದ್ದ ನಂತರ ಗವಾನ ಎಲ್ಲಾ ಅಧಿಕಾರ ನೋಡಿಕೊಳ್ಳುತ್ತಿದ್ದ. ಮಹಮ್ಮದ ಗವಾನ ಇತನು ಪರ್ಶಿಯಾದ ಗಿಲಾನ ಎಂಬ ರಾಜ್ಯದ ಗವಾನ ಎಂಬ ಗ್ರಾಮದಲ್ಲಿ ಜನಿಸಿದ ಇವನು ಅನನ್ಯ ಸೂಫಿ ಪಂಥೀಯವನಾಗಿದ್ದನು. ಗಿಲಾನಿನಲ್ಲಿ ರಾಜಕೀಯ ಕ್ಷೋಭೆ ಉಂಟಾದಾಗ ಗಿಲಾನ ರಾಜ್ಯವನ್ನು ತೊರೆದ ಗವಾನ ಚಿಕ್ಕಪ್ಪನೊಂದಿಗೆ ಮಕ್ಕಾ ಸೇರಿದನು. ಆ ಸಮಯದಲ್ಲಿ ಪರ್ಶಿಯಾದ ಮುಜೀಬುಲ್ ಕಿರ್ಮಾನಿ ಎಂಬ ಸೂಫಿ ಸಂತನು ಬೀದರನಲ್ಲಿ ನೆಲಸಿ ಪ್ರಸಿದ್ಧನಾಗಿದ್ದನು. ಇವನನ್ನು ಕಾಣುವ ಉದ್ದೇಶದಿಂದ ಬೀದರಿಗೆ 1453 ರಲ್ಲಿ ಮಹಮ್ಮದ ಗವಾನ ಬಂದು ನಂತರ ಸುಸಂಸ್ಕೃತ ವರ್ತನೆ ಮತ್ತು ಪ್ರಮಾಣಿಕತೆಯಿಂದಾಗಿ 2ನೇ ಅಲ್ಲಾವುದ್ದಿನ ಪ್ರಧಾನ ಮಂತ್ರಿಯಾಗಿದ್ದ. ನಂತರ ಹುಮಾಯೂನ ನಿಜಾಂ ಷಾ 3ನೇ ಮಹಮದನ ಕಾಲದಲ್ಲಿ ಪ್ರಧಾನ ಮಂತ್ರಿಯಾಗಿದ್ದ. ಇತನು ರಾಜಕೀಯ ಆಡಳಿತ, ಸಾಮಾಜಿಕ, ಕಲೆ, ಸಾಹಿತ್ಯ, ಎಲ್ಲದರಲ್ಲೂ ಪ್ರಗತಿ ಸಾಧಿಸಿದ. ಮಹಮ್ಮದ ಗವಾನ ಮದರಸಾ ವಿದ್ಯಾಲಯ ಕಟ್ಟಿಸಿದ

ಮಹ್ಮದ ಗವಾನ ಏಳಿಗೆ ಸಹಿಸದ ಕೆಲವರು ಕುತಂತ್ರಕ್ಕೆ ಬಲಿಮಾಡಿದರು. ಸಂಚುಗಾರರ ಮಾತಿಗೆ ಒಳಗಾಗಿ 1481 ರಲ್ಲಿ ಸುಲ್ತಾನ 3ನೇ ಮಹ್ಮದಶಾಹ ಗವಾನನನ್ನು ಹತ್ಯಗೊಳಿಸಿದ. ತದನಂತರ ಸುಲ್ತಾನನಿಗೆ ತನ್ನ ತಪ್ಪಿನ ಅರಿವಾಯಿತು. ಆದರೆ ಕಾಲ ಮಿಂಚಿ ಹೋಗಿತ್ತು. ಪಶ್ಚತಾಪದ ಬೇಗೆಯಲ್ಲಿ ಸುಲ್ತಾನ ಬೆಂದು ಬೆಂದು ಅಸುನಿಗಿದಾ. ಬಹಮನಿ ಸಾಮ್ರಾಜ್ಯ ಪತನದ ಹಾದಿಹಿಡಿಯಿತು.

ಬಹಮನಿಯರ ಅಧೀನ ಅಧಿಕಾರಿಗಳಾಗಿದ್ದ ಬರೀದಿ ಶಾಹಿಗಳು ಪ್ರಾಬಲ್ಯತಳೆದ ರಾಜ್ಯವನ್ನು ವಶಪಡಿಸಕೊಂಡರು. ಕಾಶಿಂ ಬರಿದನು ಅಧಿಕಾರ ವಹಿಸಿಕೊಂಡ ನಂತರ ಅಮೀರ ಬರೀದ, ಅಲಿ ಬರೀದ, ಇಬ್ರಾಹಿಂ ಬರೀದ, ಖಾಂಜ ಬರೀದ, ಖಾಂಜಾ ಬರೀದ ಸಾಹಾನಿ ಖಾಂಜ ಬರೀದ ಉಲಾ ಚಾಂದಸುಲ್ತಾನ ಖಾಂಜ ಬರಿದ ಅಲ್ಲಿ ಇದ್ದರು. ಬರೀದ ಶಾಹಿಗಳು ಬಹಮನಿಗಳು ಅರಮನೆ ಕಟ್ಟಡ ಮಹಲಗಳನ್ನು ಪುನರ ರಚನೆ ಮಾಡಿದರು. ಇವರು ರಂಗಿನ ಮಹಲ ಕಟ್ಟಿಸಿದರು. ಕ್ರಮೇಣ ಬಿಜಾಪೂರದ ಆದಿಲ್ ಶಾಹಿಸುಲ್ತಾನರು ಬೀದರನ್ನು ಬರೀದಶಾಹಿಗಳಿಂದ ಬಿಜಾಪೂರಕ್ಕೆ ಸೇರಿಸಿಕೊಂಡರು....... ಕ್ರಮೇಣವಾಗಿ ಇಂದು ಬೀದರ ಜಿಲ್ಲೆಯಾಗಿ ಉಳಿದಿದ್ದೆ.

## ಬೀದರ ಉತ್ಸವ

ಡಿಸೆಂಬರ 27, 2006 ರಂದು ಬೀದರ ಕೋಟೆಯೋಳಗೆ ಬೀದರ ಉತ್ಸವ ಆಚರಿಸಲಾಗಿತ್ತು. ಡಿಸೆಂಬರ 27, 28, 29 ಮೂರು ದಿವಸ ಈ ಉತ್ಸವ ಜನರು ಅತ್ಯಂತ ಹರುಷದಿಂದ ಆಚರಿಸದರು. ಬೀದರ ಭವ್ಯ ಪರಂಪರೆ ಹೊಂದಿರುವ ಸರ್ವಧರ್ಮ ಸಮನ್ವಯದ ಸಂಕೇತದ ನಾಡು, ಈ ಹಿನ್ನಲೆಯಲ್ಲಿ ಆಯಾ ಸಮಿತಿಗಳ ನೇತೃತ್ವದಲ್ಲಿ ಜ್ಯೋತಿ ಯಾತ್ರೆಗಳು ಆಗಮಿಸಿದ್ದವು. ಇವು ಮೊದಲು ಡಿ. 27 ರಂದು 2-30ಕ್ಕೆ ಮಧ್ಯಾಹ ಬೀದರ ನಗರದ ನೆಹರು ಕ್ರಿಡಾಂಗಣದಲ್ಲಿ ಆಗಮಸಿದವು. ಜಿಲ್ಲೆ ಉಸ್ತುವಾರಿ ಸಚಿವ ಬಂಡೆಪ್ಪ ಖಾಶೆಂಪೂರ, ಜಿಲ್ಲಾಧಿಕಾರಿ ಮುನೀಶ ಮೌದ್ಗೀಲ್ ಜ್ಯೋತಿಗಳಿಗೆ ಸ್ವಾಗತಿಸಿದರು. ಅಲ್ಲಿಂದ ಜ್ಯೋತಿಗಳ ಮೇರವಣಿಗೆ ಮಾಡುತ್ತ ಬೀದರ ನಗರ ರಸ್ತೆಯಿಂದ ಕೋಟೆಯೊಳಗೆ ಆಗಮಿಸಿದವು.

ಅಂದು ಸಂಜೆ ಕೋಟೆಯಲ್ಲಿ ಮುಖ್ಯ ಮಂತ್ರಿ ಎಚ್.ಡಿ.ಕುಮಾರಸ್ವಾಮಿ ಜೋತಿಗಳಿಗೆ ಪೂಜೆ ಸಲ್ಲಿಸಿ ಮತ್ತೊಂದು ಜ್ಯೋತಿ ಬೆಳಗುವ ಮೂಲಕ ಬೀದರ ಉತ್ಸವಕ್ಕೆ ಚಾಲನೆ ನೀಡಿದರು. ಈ ಜ್ಯೋತಿಗಳ ಬಸವೇಶ್ವರ ಜ್ಯೋತಿ, ಬೌದ್ಧಮೌಂಟ ಜ್ಯೋತಿ, ಗುರು ನಾನಕ ಪಂಚ ಪ್ಯಾರೆ ಜ್ಯೋತಿ, ವೀರಭದ್ರೇಶ್ವರ ಜ್ಯೋತಿ, ಮಾಣಿಕ ಪ್ರಭು ಜ್ಯೋತಿ, ಲಿಂ. ಡಾ. ಚನ್ನಬಸವ ಪಟ್ಟದ್ದೆವರ ಕನ್ನಡ ಜ್ಯೋತಿ, ಬಂಜಾರ ಸಮಾಜ ಸೇವಾಲಾಲ ಜ್ಯೋತಿ, ಕ್ರೈಸ್ತ ಜ್ಯೋತಿ, ಬಹಮನಿ ಚಿರಾಗ ಸೈಯದ ಫಕ್ರೋದಿನ ಖಾದರಿ ಬಾಲಗಿ ಜ್ಯೋತಿ. ಆಗಮಿಸಿದವು. ಈ ಉತ್ಸವದಲ್ಲಿ ಅಂದು ಅನೇಕ ಜನರು ಆಗಮಿಸಿದರು. ಎಲ್ಲ ಜಾತಿ, ಜನಾಂಗ ಧರ್ಮದ ಜನರು ಬಂದು ಈ ಉತ್ಸವದಲ್ಲಿ ಪಾಲ್ಗೊಂಡಿದರು. ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳು ಮೂರು ದಿವಸ ನಡೆದವು. ಹಾಗೂ ಅನೇಕ ಕ್ರಿಡೆಗಳ ಸ್ಪರ್ಧೆ ಕೂಡ ಇದ್ದಿವು. ಈ ಕಾರ್ಯಕ್ರಮದಲ್ಲಿ ಕಲೆ, ಸಾಹಿತ್ಯ

ಸಂಸ್ಕೃತಿ, ಕ್ರೀಡೆ ಸೇರಿದಂತೆ ಹತ್ತು ಹಲವು ವೈವಿಧ್ಯಮಯ ಕಾರ್ಯಕ್ರಮಗಳು ಉತ್ಸವದಲ್ಲಿ ಜರುಗಿದವು. ಈ ಉತ್ಸವ ಜನರಿಗೆ ಹಬ್ಬದ ವಾತಾವರಣವಾಗಿತ್ತು. ಅನೇಕ ಪಟಾಕೆ, ಮದ್ದು ಹಾರಿಸಿ ಉತ್ಸವ ಅತ್ಯಂತ ಮೇರಗುಗೋಳಿಸಿ ಜನರಲ್ಲಿ ಆನಂದಉಂಟು ಮಾಡಿತ್ತು. ಕೋಟೆಯೋಳಗೆ ನಿರ್ಮಿತವಾದ ಭವ್ಯ ವೇದಿಕೆ ಮೇಲೆ ನಿತ್ಯ ಸಂಜೆ 5-00 ರಿಂದ ತಡರಾತ್ರಿಯ ವರೆಗೆ ವಿವಿಧ ಕಾರ್ಯಕ್ರಮನಡೆದವು. ಭರತನಾಟ್ಯ, ಜಾನಪದ ನೃತ್ಯ, ಶಾಸ್ತ್ರೀಯ ನೃತ್ಯ, ಜುಗಲ ಬಂದಿಹಾಸ್ಯ, ಪಂಜಾಬ ಬಾಂಗಡ, ಅಂತಾಕ್ಷರಿ, ಜಾನಪದ ಜಾತ್ರೆ, ಮುಷಾಯಿರಾ, ಖವ್ವಾಲಿ ಉರ್ದುಹಾಸ್ಯವಾದ್ಯ ಸಂಗೀತ ಮುಂತಾದವು ಜನಮನ ರಂಜಿಸಿದವು. ಈ ಉತ್ಸವದ ಮೂಲಕ ಪ್ರವಾಸೋದ್ಯಮ ಅಭಿವೃದ್ಧಿ ಪಡಿಸುವುದು ನಮ್ಮ ಧ್ಯಯವಾಗಿದೆ. ಉತ್ಸವವನ್ನು ಜನೋತ್ಸವಾಗಿ ಆಚರಿಸಲಾಗುವುದು ಎಂದು ಬಂಡೆಪ್ಪಾ ಖಾಶೆಂಪೂರ ಹೇಳಿದರು. ಬೀದರ ಜಿಲ್ಲೆಯ ಐದು ತಾಲ್ಲೂಕಗಳಿಂದ, ಹಳ್ಳಿಗಳಿಂದ ಜನರು ಬಂದು ಈ ಉತ್ಸವದಲ್ಲಿ ಸೇರಿದರು. ಅಂದು ಬೀದರ ಕೋಟೆ ನೋಡಲು ಅತ್ಯಂತ ವಿಜೃಂಭಣೆಯಿಂದ ಮೇರೆದಿತ್ತು. ಕೋಟೆಯ ತುಂಬ ಜನರು ಅಂದು ಸೇರಿದರು. ಸಾವಿರ ಸಲ ಬರೆಯುವುದಕ್ಕಿಂತ ಚಿತ್ರಗಳು ಹಿರಿದು ಲಕ್ಷ ಲಕ್ಷ ಚಿತ್ರಕ್ಕಿಂತ ಬಂದು ನೋಡಿಗರೆ ? ಅದೆ ಹಿರಿದು ನೋಡ ಬನ್ನಿ ಬೀದರನ ಎಂದು ಎಲ್ಲ ಜನರಿಗೆ ಸ್ವಾಗತಿಸಿತ್ತು ಬೀದರ ಉತ್ಸವ.

## ಆಧಾರ ಗ್ರಂಥಗಳು


1) ಬೀದರ ಜಿಲ್ಲಾ ದರ್ಶನ : ಡಾ॥ ಜಗನ್ನಾಥ ಹೆಬ್ಬಾಳೆ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಬೀದರ.

2) ದೇವು ಪತ್ತಾರ, ವರದಿಗಾರರು, ಪ್ರಜಾವಾಣಿ, ಬೀದರ

3) ಬೀದರ ಜಾಲ್ಲಾ 72ನೇ ಕನ್ನಡ ಸಾಹಿತ್ಯ ಸಮ್ಮೇಳನದ ಚೆಂಬೆಳಕು - ನೆನಪಿನ ಕಾಣಿಕೆ.

4) ರಂಜೇರುವಿನ ಸಿಂದರು : ಪ್ರೊ.ಸಂಗಯ್ಯಾ ಹಿರೇಮಠ

5) ಬೀದರ ಉತ್ಸವ ಸ್ಮರಣ ಸಂಚಿಕೆ 2006 : ಬೀದರ ಜಿಲ್ಲೆಯ ಐತಿಹಾಸಿಕ ಹಿನ್ನಲೆ ಪ್ರೊ. ಬಿ. ಆರ್. ಕೊಂಡಾ

## ಬೀದರ ಕೋಟೆ ಒಳಗಿನ ಐತಿಹ್ಯ ಕಥೆಗಳು :

ಬೀದರ ಕೋಟೆಯ ಒಳಗಡೆ ಅನೇಕ ಸ್ಥಳಗಳ ಕುರಿತು. ವ್ಯಕ್ತಿಗಳ ಕುರಿತ ಧಾರ್ಮಿಕ ಐತಿಹ್ಯ ಕಥೆಗಳಿವೆ. ಐತಿಹ್ಯ ಕಥೆಗಳು ಒಬ್ಬರಿಂದ ಒಬ್ಬರಿಗೆ ಬಾಯಿಂದ ಬಾಯಿಗೆ ಜನರಿಂದ ಜನರಿಗೆ ಹರಿದುಬಂದಿರುತ್ತವೆ. ಇವು ಗತಕಾಲದಲ್ಲಿ ನಡೆದ ಘಟನೆಗಳಾಗಿರುತ್ತವೆ. ಐತಿಹ್ಯ ಇತಿಹಾಸಕ್ಕೆ ಮಾಹಿತಿ ಒದಗಿಸಿ ಕೊಡುವಂಥವಾಗಿರುತ್ತದೆ. ಐತಿಹ್ಯ ಊರು, ವ್ಯಕ್ತಿ ಸ್ಥಳ ಇವುಗಳಲ್ಲಿ ಯಾವುದಾದರೊಂದು ಇತಿಹಾಸಕ್ಕೆ ಸಂಬಂಧ ಪಟ್ಟದ್ದಾಗಿರುತ್ತದೆ. ವ್ಯಕ್ತಿಗಳಿಗೆ ಸ್ಥಳಗಳಿಗೆ ಘಟನೆಗಳಿಗೆ ಸಂಬಂಧಿಸಿದಂತೆ ಯಾವುದೇ ನಿರ್ದಿಷ್ಟ ಹಿನ್ನಲೆಯಲ್ಲಿ ಹುಟ್ಟಿಕೊಳ್ಳುವ ಕಥೆಗಳು ಐತಿಹ್ಯಗಳು ಗತ ಇತಿಹಾಸವನ್ನು ತೆರೆದು ತೋರಿಸುವ ಐತಿಹ್ಯಗಳು ಜನಪದದಲ್ಲಿ ವಿಶಿಷ್ಟ ಸ್ಥಾನ ಪಡೆದು ಕೊಂಡಿವೆ.

## ಕೋಟೆ ನಿರ್ಮಾಣ ಕುರಿತ ಐತಿಹ್ಯಕಥೆ :

ಬಹಮನಿ ರಾಜ್ಯ ಸ್ಥಾಪಿಸುವದಕ್ಕಿಂತ ಮುಂಚೆ ಕೋಟೆಯ ಒಳಗಡೆ ಕಾಕತೀಯರ ಹಳೆಯ ಸಣ್ಣ ಕೋಟೆ ಇದ್ದಿತ್ತು. ಇದರಲ್ಲಿ ಭೀಮಸಿಂಗ್ ಅರಸನಾಗಿದ್ದ. ಇತನ ನಂತರ ವರಂಗಲ ದರಣಿ ರುದ್ರಮ ಇದ್ದಳು. ಇವಳು ಆಳ್ವಿಕೆ ಮಾಡಿಲ್ಲಗೋಟಮ್ಮಗೋಟ್ಟಿಯಲ್ಲಿಕೇವಲ ಹಿಂದು ದೇವರ ಗುಡಿಗಳು ಕಟ್ಟಿಸಿದ್ದಳು.

ಮಹಮ್ಮದ ಬಿನ್‌ತುಘಲಕ್ ಬೀದರ ಕೋಟೆ ಕಾಕತೀಯರಿಂದ ವಶಪಡಿಸಿಕೊಂಡ ನಂತರ ತನ್ನ ದೇಶಕ್ಕೆ ಮರಳಿ ಹೋಗಿದ ಅಹಮ್ಮದಶಾ ಬೀದರನಲ್ಲಿ ಹೊಸ ಕೋಟೆ ಕಟ್ಟಲು ಯೋಚಿಸಿದ. ಅಹಮ್ಮದ ಷಾ ಮೊದಲು ತನ್ನ ಕೋಟೆಯನ್ನು ಮೇಮತಾಬಾದನಲ್ಲಿ ಕಟ್ಟಲು ಪ್ರಾರಂಭಿಸಿದ ಇದು ಗ್ರಾಮ ಬೀದರಿನ ಚೀಲರ್ಗಿ ಶ್ರೀಮಂಡಲ, ಕಂಗಟಿ, ಗ್ರಾಮದ ಹತ್ತಿರ ಇದೆ. ಒಂದು ದಿವಸ ಕೋಟೆಯ ಕಟರದ ಮೇಲೆ ಕಾಗೆ ಕುತ್ತು ಕಂದಕದ್ದಾಗಿನ್ನ ನೀರು ಕುಡಿಯುವುದನ್ನು ಅಹಮ್ಮದ ಷಾ ಕಂಡನು ಆ ಕಾಗೆ ಕಟರದ ಮೇಲಿಂದ ಕಂದಕದಾಗಿನ ನೀರುಕುಡಿದ ಕಾರಣ ಅಹಮ್ಮದ ಷಾ  ನಿಗೆ ಕೆಟ್ಟ ಅನುಮಾನ ಅಪಶಕುನ ಬಂದಿತ್ತು. ಆ ಕೋಟೆ ಕಟ್ಟವ ಸ್ಥಳ ಬಿಟ್ಟು ನಂತರ ಬೀದರ ನಗರದ ಕಡೆ ಸ್ಥಳ ಹುಡುಕುತ್ತ ಬಂದ ಅಹಮ್ಮದ ಶಾನಿಗೆ ಆ ಸ್ಥಳ ಇಷ್ಟವಾಗಲಿಲ್ಲ.

ಅಹಮ್ಮದಷಾ ನಂತರ ಸ್ಥಳನೋಡತ ಬೀದರ ಕಡೆಬಂದು ನೋಡುತ್ತಾನೆ. ಬೀದರನ ಹಳೆಯ ಖಿಲಾದಲ್ಲಿ ಭೀಮಸಿಂಗ್‌ನ ವರಾಂಡದಲ್ಲಿ ಲೊಂಡ ಎಂಬ ಪ್ರಾಣಿ ಇತ್ತು. ಹೊರಗಡೆ ಇದ ಅಹಮ್ಮದ ಶಾನ ಹತ್ತಿರ ನಾಯಿ ಇತ್ತು. ಭೀಮಸಿಂಗ್‌ನ ಲೊಂಡ ಪ್ರಾಣಿಯನ್ನು ಕಂಡು ಅಹ್ಮದ ಷಾನ ಲೊಯಿ ತೊಂಡಗೆ ಪ್ರಾಣಿಗೆ ಬೆನು ಅಂಟಿತ್ತು. ಈ ದೃಶ್ಯವನ್ನು ಕಂಡು ಅಹಮ್ಮದ ಶಾನಿಗೆ ಈ ಸ್ಥಳವೇ ಇಷ್ಟವಾಯಿತು. ನಂತರ ಅಹ್ಮದ ಷಾನು ಈ ಕಾಕತೀಯರ ಹಳೆಕೋಟೆಯ ಸ್ಥಳದಲೇ ಹೊಸ ಕೋಟೆಯನ್ನು ಕಟ್ಟಲು ಪ್ರಾರಂಭಿಸಿದ.

ಅತ್ಯಂತ ಸುಂದರ ಭವ್ಯವಾದ ಕೋಟೆಯನ್ನು ಅಹಮ್ಮದಷಾ ಕಟ್ಟಿಸಿದನು. ಆತನು ಕಟ್ಟಿಬಿಟ್ಟಂತಹ ಕೋಟೆ ಇನ್ನು ಕೂಡ ಇದೆ. ಹಾಗೂ ಕೋಟೆಯ ಸುತ್ತಲು ಕಂದಕ ಕಟ್ಟಿಸಿದ್ದಾನೆ. ಈ ಕಂದಕ ಇಂದು ಕೂಡ ಇದೆ. ಇದರಲ್ಲಿ ಯಾರು ಹೋಗುವುದಿಲ್ಲ.

## ಕೋಟೆಯ ಕಟ್ಟಡ ನಿರ್ಮಾಣ ಕುರಿತ ಐತಿಹ್ಯ ಕಥೆ :

ಕೋಟೆ ಕಟ್ಟುವ ಮೊದಲು ಆ ಸ್ಥಳದಲ್ಲಿ ಹುಡಗರು ಚಂಡಾಡುತ್ತಿದ್ದರು. ಸುಲೆಮಾನ ಎಂಬ ಹುಡಗನು ಚಂಡು ಹೊಡೆದಾಗ ಜನರಿಗೆ ತಾಗಿತ್ತು. ಆ ಜನರು ಸುಲೇ ಮಾನನಿಗೆ ನಿನ್ನಗ ಅಕ್ಕ ತಂಗಿ ಯಾರು ಇಲ್ಲವೇನು ? ಎಂದು ಬೈದರು. ಆಗ ಸುಲೆಮಾನ ತನ್ನ ಮನೆಗೆ ಬಂದು ತನ್ನ ತಾಯಿಗೆ ಕೇಳಿದ ನನಗೆ ಅಕ್ಕ ತಂಗಿಯಾರು ಇಲ್ಲವೇನು ? ಎಂದ ಆಗ ತಾಯಿ ಹೇಳಿದಳು. ನಿನಗ ಒಬ್ಬ ಅಕ್ಕ ಇದ್ದಾಳೆ. ಅವಳು ತಳಕ್ವಾಟಿಯಲ್ಲಿ ಇದ್ದಿದ್ದಾಳೆ. ಅವಳನ್ನು ತಳಕ್ವಾಟಿಯಲ್ಲಿ ಮದುವೆ ಮಾಡಿ ಕೋಟ್ಟಿದ್ದೆವೆ ಎಂದು ಹೇಳಿದಳು ಮತ್ತು ಆಕೆಯ ಹೆಸರು ದ್ಯಾವಮ್ಮ ಇದೆ ಎಂದು ಹೇಳಿದಳು.

ಆಗ ತಮ್ಮ ಸುಲೆಮಾನ ಅಕ್ಕದ್ಯಾವಮ್ಮನನ್ನು ನೋಡಲು ತಳಕ್ವಾಟಿಗೆ ಬಂದನು. ಅಕ್ಕ ದ್ಯಾವಮ್ಮ ತಮ್ಮ ಬಂದನೆಂದು ಸಂತೋಷಪಟ್ಟು ಆತನಿಗೆ ಬಿಸಿ ಅಡುಗೆ ಮಾಡಿ ಊಟಕ್ಕೆ ಬಡಿಸಿದಳು. ಸುಲೆಮಾನ ಊಟಮಾಡುವ ಸಮಯದಲ್ಲಿ ದ್ಯಾವಮ್ಮನ ಅಂಗಳದಲ್ಲಿ ಪೋಲಿಸರು ಬಂದು ನಿಂತಿದರು. ದ್ಯಾವಮ್ಮ ಅವರನ್ನು ಕಂಡು ಗಾಬರಿಗೊಂಡು ಅವರನ್ನು ಇಲ್ಲಿ ಯಾಕ ಬಂದಿರಿ ಎಂದು ಕೇಳಿದಳು. ಅದಕ್ಕೆ ಅವರು ನಮ್ಮ ಸರಕಾರ ಸುತಿಮಾನ ಎಂಬ ಹೆಸರಿನ ವ್ಯಕ್ತಿ ಸಿಕ್ಕಿದರೆ ಆತನನ್ನು ಕರೆದು ತನ್ನಿ ಎಂದಿದ್ದಾರೆ ಅದಕ್ಕೆ ಬಂದಿದ್ದೇವೆ ನಿನ್ನ ತಮ್ಮನ ಹೆಸರು ಸುಲೆಮಾನ ಆಗಿದೆ ಆದಕಾರಣ ನಾವು ನಿನ್ನ ತಮ್ಮನನ್ನು ಕರೆದುಕೊಂಡು ಹೋಗುತ್ತೇವೆ ಎಂದರು. ಆಗ ಅಕ್ಕ ದ್ಯಾವಮ್ಮ ಅಳುತ್ತ ಇದ್ದಳು ಪೋಲಿಸರು ತಮ್ಮನನ್ನು ಕರೆದುಕೊಂಡು ನಡೆದರು. ಅಕ್ಕ ದ್ಯಾವಮ್ಮ ಅವರ ಹಿಂದೆ ಅಳುತ್ತಾ ನಡೆದಳು. ಸರಕಾರನ ಹತ್ತಿರ ಬಂದರು. ಸರಕಾರವನ್ನು ಇದ್ದ ವಿಷಯ ತಿಳಿಸುತ್ತಾನೆ. ಆಗ ಅಕ್ಕ ದ್ಯಾವಮ್ಮ ಅಳುತ್ತ ನನ್ನ ತಮ್ಮನಿಗಿ ಕೋಟೆಯ ಒಳಗೆ ಹಾಕಿ ಕಟ್ಟಬೇಡಿರಿ. ನನಗ ಹಾಕಿ ಕಟ್ಟಿರಿ ಎಂದು ಸರಕಾರನಿಗೆ ಬೇಡಿ ಕೊಂಡಳು. ಸರಕಾರ ನಂತರ ಒಪ್ಪಿದನ್ನು ದ್ಯಾವಮ್ಮ ಬಸುರಿ ಆಗಿದ್ದಳು. ಅವಳಿಗೆ ಬೇಕಾದ ತಿಂಡಿ ತಿನಿಸು ಇಟ್ಟರು. ಅವಳ ಎಲ್ಲ ಆಶೆ ಇಡೆರಿಸಿದರು. ಹೊಸ ಸಿರೆ ಕುಪ್ಪಸ ಉಡಿಸಿ, ಒಂದು ಕೋಣೆಯ ಒಳಗೆ ಹಾಕಿದರು. ಅವಳಿಗೆ ಬೇಕಾದ ಎಲ್ಲ ತಿನಿಸು ಒಳಗಡೆನೆ ಇಟ್ಟಿದ್ದರು. ನಂತರ ಕೋಣೆಯನ್ನು ಮುಚ್ಚಿ ಕಟ್ಟಿದರು. ನಂತರ ಕೋಟೆಯನ್ನು ಕಟ್ಟಲು ಪ್ರಾರರಂಭಿಸಿದರು. ಆವಾಗ ಕೋಟೆ ನಿಂತಿತ್ತು. ಇಲ್ಲದಿದ್ದರೆ ಕಟ್ಟಿದ ಕೋಟೆ ಬಿಳತ್ತಾ ಇತ್ತು.

ದ್ಯಾವಮ್ಮನ ಬಾಣತನ ಒಳಗೆ ಆಗಿತ್ತು. ಅವಳು ಒಳಗಡೆನೆ ದಿನಾಲು ಮಗುವಿಗೆ ಜೋಗುಳ ಹಾಡುತ್ತಿದ್ದಳು. ಹೀಗೆ ಒಂದು ದಿನ ಆ ಕಡೆ ಒಬ್ಬ ಕುರುಬ ಕುರಿ ಕಾಯುತ್ತಾ ಬಂದನು. ಅವಳು

ಹಾಡುವುದನ್ನು ಕೇಳಿ ಬೈದನು. ಆಗ ದ್ಯಾವಮ್ಮ ಆ ಕುರುಬನಿಗೆ ಶಾಪ ಹಾಕಿದಳು. ಆತನ ಕುರಿಗಳೆಲ್ಲ ಅದೆ ಸ್ಥಳದಲ್ಲಿ ಕಲಾದವು ಎಂದು ಜನರು ಹೇಳುತ್ತಾರೆ. ಎಷ್ಟೂ ದಿನಗಳ ವರೆಗೆ ಅವಳು ಜೋಗುಳ ಹಾಡುವುದು ಜನರು ಕೇಳುತ್ತಿದ್ದರೆಂದು ಹೇಳಲಾಗಿದೆ. ಹಾಗೂ ಅವಳು ಅತ್ತ ಕಣ್ಣಿರು ಕೂಡ ಕಲ್ಲಗಳ ಮೇಲೆ ಇವೆ ಎಂದು ಜನರು ಹೇಳುತ್ತಾರೆ. ಈ ಜನಪದ ಐತಿಹ್ಯ ಕಥೆಯನ್ನು ಬೀದರ ನಗರದ ಸುತ್ತಮುತ್ತಲಿನ ಜನಪದರು ಸೋಗಸಾಗಿ ಹಾಡುತ್ತಾರೆ.

### ಕೋಟೆ ಒಳಗಿನ ಭವಾನಿ ಮಂದಿರದ ಐತಿಹ್ಯ ಕಥೆ :

ಕೋಟೆಯ ಒಳಗಿನ ಭವಾನಿ ಮಂದಿರ ಕೋಟೆಯನ್ನು ಕಟ್ಟುವದಕಂತ ಮೊದಲಿನಿಂದೆ ಇದೆ. ಮೊದಲು ಚಿಕ್ಕದಾಗಿತ್ತು. ಇವಾಗ ದೊಡ್ಡದಾಗಿ ಕಟ್ಟಿದ್ದಾರೆ. ದಸರದಲ್ಲಿ ಈ ಭವಾನಿಯನ್ನು ಕೋಟೆಯ ಒಳಗಿನಿಂದ ಬೀದರ ನಗರದ ಶಾಹಗಂಜದ ಅಂಜನಯ್ಯ ಮಂದಿರ ವರೆಗೆ ದೇವಿಯನ್ನು ಮೇರವಣಿಗೆ ಮಾಡುತ್ತಾರೆ. ಹುಲಿಯ ಮೇಲೆ ಕುಳಿತ ಭವಾನಿ ಪ್ರತಿಮೆಯನ್ನು ಮೇರವಣಿಗೆ ಮಾಡುತ್ತ ಅನೇಕ ಜನರು ಇದರಲ್ಲಿ ಪಾಲ್ಗೊಳುತ್ತಾರೆ. ಎಲ್ಲ ಜಾತಿ ಜನಾಂಗದವರು ಇದರಲ್ಲಿ ಸೇರಿಸುತ್ತಾರೆ. ಅನೇಕ ಜನರ ಮೈಯಲ್ಲಿ ಭವಾನಿದೇವಿ ಬಂದಿರುತ್ತಾಳೆ.

ಕಾಲಾಗಿನ ಗೇಜ್ಜಿ ಘನಗರದೆ ಕಾಲಲ್ಲಿ
ಕಾಲಾಗಿನ ಎಲ್ಲ ಗೇಜ್ಜಿ ನಡಗ್ಯಾವೆ ಕಾಳಮ್ಮ
ಭವಮಂಡಲ ನಡುಗ್ಯಾದ
    ಹಂಡ ಎತ್ತಿನ ಮೇಲೆ ಬಂಡಾರ
    ಬರಕೊಂಡು ಕೋಟಿ ಕಾಳಮ್ಮ
    ನಡೆದಾಳೆ.
ಕೋಟಿಯಾ ಕಾಳಮ್ಮ ನಡೆದಾಳೆ ಖಿಲಾದಾಗಿಂದ
ಭವಮಂಡಲವೇಲ ನಡಗ್ಯಾವೆ.
    ಎಡಗಯಿ ಆಗಸಾಲ ಬಲಗಯಿ ಬಂಗಾರ
    ಮಲ್ಲಣನ ಮುತ್ತು ಕಾಳಮ್ಮನ ನತ್ತು
    ಕಾಳಮ್ಮನ ಗುಡಿಯಾಗ ಹೆಳಕಿ ಮಾಡುತ್ತಾಳೆ.
    ಬಂದ ಬಗತರಿಗೆ ವರಕೋಟೆ.
ಬಂದರ ಭಕ್ತರಿಗೆ ವರಕೋಟ್ಟೆ ಕಾಳಮ್ಮ
ಕಾಲಗಿನ ಗೆಜ್ಜೆ ಗಳನೆಂದೆ.

ಒಬ್ಬ ಬಡವ ಗಾಣಿಗ ಹಾಗೂ ಆತನ ಹೆಂಡತಿ ಇದ್ದರು. ಇವರು ಬಹಳ ಬಡವರಾಗಿದರು. ಇವರಿಗೆ ಮಕ್ಕಳಿರಲಿಲ್ಲ. ಹೀಗೆ ಒಂದು ದಿವಸ ಬಡವ ಗಣಿಗ ಹೋಲದ ಕಡೆ ಹೋಗತಾ ಇದ್ದ. ಒಂದು ಚಂಡಿ ಚಪಲ ಎಂಬ ತಪ್ಪಲ ಗಿಡಗಳ ಮಧ್ಯದಲ್ಲಿ ಒಂದು ಮಗು ಅಳುತ್ತಿತ್ತು. ಆ ಮಗು ಅಳುವ ದ್ವನಿ ಗಣಿಗನ ಕಿವಿಗೆ ಬಿತ್ತು. ಆತನು ಆ ಮಗು ಅಳುವಕಡೆ ಬಂದು ನೋಡುತ್ತಾನೆ.

ಇಂತಹ ತಪ್ಪಲಲ್ಲಿ. ಯಾರು ಈ ಮಗುವನ್ನು ಬಿಟ್ಟು ಹೋಗಿದಾರೆ ಎಂದು ಆ ಮಗುವನ್ನು ಎತ್ತಿಕೊಂಡು ಮನೆಗೆ ತಂದ ಮನೆಗೆ ಬಂದು ಹೆಂಡತಿಗೆ ಹೊರಗೆ ಕರೆದು ಮಗುವನ್ನು ತೋರಿಸಿದ ಅದಕ್ಕೆ ಹೆಂಡತಿ ಈ ಮಗು ಯಾರದ ತಂದಿರಿ ಎಂದು ಕೆಳುತ್ತಾಳೆ. ಅದಕ ಗಂಡ ಹೆಳತ್ತಾನ. ಈ ಮಗುವನ್ನು ಯಾರೂ ಚಂಡಿ ಚಪ್ಪಲನಲ್ಲಿ ಬಿಸಾಡಿದ್ದಾರೆ. ಅದು ಅಳುತ್ತಿತ್ತು. ಇದನ್ನು ನೋಡಿ ನಾನು ಮನೆಗೆ ತಂದಿದ್ದೆನೆ ಎಂದನು.

ನಮ್ಮಗೆ ಮಕ್ಕಳ ಭಾಗ್ಯ ಇಲ್ಲ. ಅದಕ್ಕೆ ಈ ಮಗುವನೆ ನಮ್ಮ ಮಗುವೆಂದು ಸಾಕೊಣ ಎಂದು ಹೇಳುತ್ತಾನೆ. ಆಗ ಹೆಂಡತಿ ಆ ಮಗುವನ್ನು ಎತ್ತಿಕೊಂಡು ಮುದ್ದಾಡಿ ಕೈನೋಡುತ್ತಾಳೆ. ಕೈಯಲ್ಲಿ ಚಕ್ರ ಇರುತ್ತದೆ. ಕಾಲಲ್ಲಿ ಚಕ್ರ ನಡು ತಲೆಯಲ್ಲಿ ಮುತ್ತುವಜ್ರ ಹೊಳೆಯುತ್ತಿರುತ್ತದೆ. ಆ ಮಗು ದೇವಿ ಇರುತ್ತಾಳೆ.

ಸ್ವಲ್ಪ ದಿವಸದ ನಂತರ ಮಗುವಿನ ನಾಮಕರಣ ಮಾಡಲು ಊರು ತುಂಬ ಹೇಳುತ್ತಾರೆ. ಅದಕ್ಕೆ ಊರು ಜನರು ನಂಬುವುದಿಲ್ಲ. ನೀವು ಬಡವರು ನೀವೆನು ಮಾಡುವಿರಿ. ಹೋಗರಿ ಎಲ್ಲಿಂದೂ ಮಗುತ್ತಂದು ತಮ್ಮ ಮಗುವೆಂದು ಹೆಳುತ್ತಾ ಇದಿರಿ. ಎಂದು ಜನರು ಅವರನ್ನು ಹಿಯಾಳಿಸುತ್ತಾರೆ. ಸ್ವಲ್ಪ ಜನರು ಬಂದು ಮಗುವಿನ ನಾಮಕರಣ ಮಾಡುತ್ತಾರೆ. ತಾಯಿ ತಂದೆ ಮಗುವಿಗೆ ಅಂಬಿ ಎಂದು ನಾಮಕರಣ ಮಾಡಿದರು. ನಂತರ ಅವಳನ್ನು ಅಂಬಿ ಅಂಬಿ ಎಂದು ಕರೆಯುತ್ತಿದ್ದರು. ಈ ಮಗು ಮನೆಗೆ ಬಂದ ನಂತರ ಬಡವ ಗಾಣಿಗನ ವೃತ್ತಿಯಲ್ಲಿ ಜಾಸ್ತಿ ಆದಾಯ ಬರ ತೋಡಗಿತ್ತು. ದಿನ ದಿನಕ್ಕೆ ಬಡವ ಗಾಣಗ್ಯ ಶ್ರೀಮಂತನಾದನು. ಅಂಬಿ, ಬೆಳೆದು ದೊಡ್ಡವಳಾದಳು. ಅಂಬಿಗೆ ಮನೆಯಲ್ಲಿ ಅನೇಕರಿದ್ದರು. ಹೀಗೆ ಒಂದು ದಿನ ಗಾಣಗ್ಯನಿಗೆ ಒಬ್ಬ ವ್ಯಕ್ತಿ ಕೇಳುತ್ತಾನೆ. ನಿಮ್ಮ ಮಗಳ ಮದುವೆ ಯಾವಾಗ ಮಾಡತ್ತಿರಿ, ಮಾಡುತ್ತೇನೆ ಎಂದರೆ ನಮ್ಮ ಹತ್ತಿರ ಒಬ್ಬ ವರ ನಿದ್ದಾನೆ ನೀವು ಮದುವೆ ಮಾಡುತ್ತೇನೆ ಎಂದರೆ ನಾನು ಆ ವರನನ್ನು ಕರೆದುಕೊಂಡು ಬರುತ್ತೇನೆ ಎಂದು ಹೇಳುತ್ತಾನೆ. ಆಗ ತಂದೆ ಗಾಣಗ್ಯ ಮದುವೆ ಮಾಡುತ್ತೇನೆ ಎಂದು ಹೇಳುತ್ತಾನೆ.

ಸ್ವಲ್ಪ ದಿವಸದ ನಂತರ ವರನನ್ನು ಕರೆದುಕೊಂಡು ಆ ವ್ಯಕ್ತಿ ಬರುತ್ತಾನೆ. ಅಂಬಿ ಮನೆಯಲ್ಲಿ ಇರುವುದಿಲ್ಲ. ಗೆಳತಿಯರ ಜೋತೆ ಆಟ ಆಡಲು ಹೋಗಿರುತ್ತಾಳೆ. ತಾಯಿ ಅವಳನ್ನು ಕರೆದು ತರುತಾಳೆ. ತಾಯಿ ಅಂಬಿಯನ್ನು ಸಿಂಗಾರ ಮಾಡುತ್ತಾಳೆ. ಹಸಿರು ಅಂಚಿನ ಸೀರೆ ಹಸಿರು ಅಂಚಿನ ಕುಪ್ಪಸ, ಬೆಳ್ಳಿ, ಬಂಗಾರದ ವಡವೆ ಹಾಕುತ್ತಾಳೆ. ಮುಗಿನ್ನಲ್ಲಿ ನತ್ತನಿ ಕಾಲಲ್ಲಿ ಗೆಜ್ಜೆಯ ಚೈನು ಕೈಯಲಿ ಬಳೆ ತಲೆಗೆ ಹೂಗಳು ಸಿಂಗಾರಮಾಡಿಕೊಂಡು ಬಂದು ನೆಂಟರ ಮುಂದ ಕುಡುತ್ತಾಳೆ. ಅಂಬಿ ಯನ್ನು ನೊಡಿದವರನ್ನು ಮದುವೆಗೆ ಒಪ್ಪಿಕೊಳ್ಳುತ್ತಾನೆ. ಆದರೆ ಅಂಬಿ ಮದುವೆಗೆ ಒಪ್ಪಿಕೊಳ್ಳುವುದಿಲ್ಲ ನಾನು ಇನ್ನು ಮಧುವೆ ಮಾಡಿಕೊಳ್ಳುವದಿಲ್ಲವೆಂದು ಹೇಳುತ್ತಾಳೆ. ಅದಕ್ಕೆ ಗಾಣಿಗ ಹೆಂಡತಿಯನ್ನು ಬೈದು ಹೊಡೆಯುತ್ತಾನೆ. ನೀನೆ ಅವಳನ್ನು ಹಾಳುಮಾಡಿದಿ ನೀನೆ ಅವಳಿಗೆ ಕಲಿಸಿದಿ. ಎಂದು ಹೋಡೆಯುತ್ತಾನೆ. ಹೋಡತಕ್ಕೆ ಹೆಂಡತಿ ಸಾಯುತ್ತಾಳೆ. ಅವಳನ್ನು ಮಣ್ಣಮಾಡುತ್ತಾನೆ. ನಂತರ ಅಂಬಿಗೆ ಮದುವೆಮಾಡಿಕೊ ಎಂದು ವತ್ತಾಯ

ಮಾಡುತ್ತಾನೆ. ಆದರೆ ಅಂಬಿ ಮದುವೆಗೆ ಒಪ್ಪಿಕೊಳ್ಳುವುದಿಲ್ಲ ನಂತರ ಗಾಣಿಗನಿಗೆ ಸಿಟ್ಟು ಬಂದು ಚಬಕಾ ತೆಗೆದುಕೊಂಡು ಅಂಬಿಗೆ ಹೋಡೆಯುತ್ತಾನೆ. ಅಂಬಿ ಮನೆ ಬಿಟ್ಟು ಓಡಿ ಓಡಿ ಹೋಗುತ್ತಾಳೆ. ತಂದೆ ಗಾಣಿಗ ಅವಳ ಬೆನಟ ಹೋಗುತ್ತಾನೆ. ಅಂಬಿ ಓಡಿ ಓಡಿ ತುಳಜಾಪುರ ಗುಡ್ಡ ಎರುತ್ತಾಳೆ. ನಂತರ ಗುಡ್ಡದ ಮೆಲೆ ನಿಂತು ಹಿಂದಕ ನೋಡುತ್ತಾಳೆ. ಗಾಣಗ್ಯ ಇನ್ನು ಅವಳನ್ನು ಬೆನಟ್ಟಿ ಬರುತ್ತಾ ಇರುತ್ತಾನೆ. ಅಂಬಿ ಇದನ್ನು ನೋಡುತ್ತಾಳೆ. ಅವಳು ನಿಂತ ಸ್ಥಳದಲ್ಲೇ ಭೂಮಿ ಬಿಚ್ಚುತ್ತದೆ. ಅಂಬಿ ಅದರ ಒಳಗೆ ಹೋಗುತ್ತಾಳೆ.

ಗಾಣಿಗ ಅಲ್ಲಿಗೆ ಬಂದು ನೋಡುತ್ತಾನೆ. ಅಲ್ಲಿ ಎನ್ನೂ ಇರುವುದಿಲ್ಲ ಆತ ಕೋಪಗೊಂಡು ಆ ಸ್ಥಳದಲ್ಲಿ ಒಂದು ಕಲ್ಲಿನಿಟ್ಟು ಅವಳು ಇದೆ ಸ್ಥಳದಲ್ಲಿ ಮತ್ತೆ ಬಂದರೆ ಅವಳನ್ನು ಹೋಡೆದು ಸಾಯಿಸುತ್ತೇನೆ ಎಂದು ಹೇಳಿ ಅಲ್ಲಿಂದ ಬರುತ್ತಾನೆ. ಮನೆಗೆ ಬಂದ ನಂತರ ಆತನಿಗೆ ಕಾಯಿಲೆ ಬರುತ್ತದೆ. ಕಾಯಿಲೆಯಿಂದ ನರಳುತ್ತಿರುತ್ತಾನೆ.

ಒಂದು ದಿವಸ ಅಂಬಿ ಮುದಕಿ ವೇಷ ಧರಿಸಿ. ಪುನಃ ತನ್ನ ತಂದೆಯ ಗುಣ ಪರೀಕ್ಷಿಸಲು ಬರುತ್ತಾಳೆ. ತಂದೆಯ ಮನೆಯ ಹತ್ತಿರ ಬಂದು ನಾನು ಜೋತಿಷ್ಯ (ಕಣಿ) ಹೇಳುತೆನೆ ಕೇಳಿ ಎಂದು ಹೇಳುತ್ತಾಳೆ. ಅದಕ್ಕೆ ತಂದೆ ನಿನಗೆ ಬೇಕು ಎಂದು ಕೇಳುತ್ತಾನೆ. ಅದಕ್ಕೆ ಏನೂ ಎನ್ನುತ್ತಾಳೆ. ತಂದಿ ಅವಳನ್ನು ಗುರುತಿಸುವುದಿಲ್ಲ ಜೋಳ, ಬೆಳ್ಳೆಕೊಡುತ್ತಾನೆ.

ಗಾಣಿಗ ನನ್ನ ಭವಿಷ್ಯ ಸತ್ಯ ಹೇಳಿದರೆ ಒಳ್ಳೆಯದು ಸುಳ್ಳು ಹೇಳಿದರೆ ನಿನ್ನನ್ನು ಶಿಕ್ಷೆ ಕೊಡುತ್ತೇನೆ ಎನ್ನುತ್ತಾನೆ. ಅದಕ್ಕೆ ಆಕ್ಕೆ ಒಪ್ಪಿಕೊಳ್ಳುತ್ತಾಳೆ. ಇದ್ದ ಸತ್ಯ ಸಂಗತಿ ಎಲ್ಲಾ ಹೇಳುತ್ತಾಳೆ. ನಿಮ್ಮಗೆ ಮಕ್ಕಳಿರಲ್ಲಿಲ್ಲ. ಬಡವರಾಗಿದ್ದಿರಿ. ಒಂದು ಮಗು ನಿಮ್ಮಗ ಸಿಕ್ಕಿತ್ತು. ಅದರಿಂದ ನೀವು ಸುಃಖವಾಗಿದಿರಿ. ನಂತರ ಆ ಮಗು ಬೆಳೆದು ದೊಡ್ಡವಳಾದ ನಂತರ ಹೆಂಡತಿಯನ್ನು ಕಳೆದು ಕೊಂಡಿದಿ ಎಂದು ಹೇಳುತ್ತಾಳೆ. ಹೌದು ನಿನು ಹೇಳುವದೇಲ್ಲ ಸತ್ಯವಿದೆ ಎಂದು ಹೇಳುತ್ತಾನೆ. ಮತ್ತು ನೀನು ನನ್ನ ಕಾಯಿಲೆ ವಾಸಿಮಾಡುವುದಾದರೆ ನಾನು ಏನು ಮಾಡಬೇಕು ಹೇಳು ನಾನು ಅದನ್ನು ಮಾಡುತ್ತೇನೆ ಎಂದು ಕೇಳುತ್ತಾನೆ.

ಅದಕ್ಕೆ ಅಂಬಿ ಮುದಕಿ ವೇಷದಲ್ಲಿ ಹೇಳುತ್ತಾಳೆ ಆಯಿತ್ತು ಕಾಯಿಲೆ ವಾಸಿಮಾಡುತ್ತೇನೆ ನಾನು ಹೇಳಿದ ಹಾಗೆ ಮಾಡು ಎಂದು ಹೇಳುತ್ತಾಳೆ.

ಏಳು ಬಂಡಿ ಕುಂಕುಮ ಬಂಡಾರ ಬದನೆ ಕಾಯಿ, ವಳ್ಳೆಗಡಿ, ಕವಡಿಮಾಳ, ಹಡಗೆ ಎಲ್ಲ ತಗೆದುಕೊಂಡು ನನ್ನ ಸ್ಥಳವಾದ ತುಳಜಾಪುರಕ ಬರಬೇಕು ಎಂದು ಹೇಳುತ್ತಾಳೆ. ಆಗ ಇನ್ನು ತುಳಜಾಪುರ ಇರಲಿಲ್ಲ. ಅಡವಿ ಆಗಿತ್ತು. ಆ ಸ್ಥಳದಲ್ಲಿ ಏನು ಇರಲಿಲ್ಲ. ಆಕೆ ಹೇಳಿದ ಹಾಗೆ ಆತ ಒಪ್ಪಿಕೊಳ್ಳುತ್ತಾನೆ. ನಂತರ ಅವಳು ಹೇಳಿದ ಹಾಗೆ ಕುಂಕುಮ ಕವಡಿಮಾಲ, ಬದನೆಕಾಯಿ, ವಳೆಗಡಿ, ಹಡ್ಡಗಿ ಎಲಾತಕ್ಕೊಂಡು ಹೋಗುತ್ತಾನೆ. ಇತಾ ಹೋಗಿದ ನಂತರ ಅಂಬಿ ಪುನಃ ಅದೇ ವೇಶದಲ್ಲಿ ನಗುತ್ತ ಕುತ್ತಿರುತ್ತಾಳೆ. ಇತನು ಹೋಗಿ ತಂದ ವಸ್ತುವೆಲ್ಲ ಅಕೆಗೆ ಒಪ್ಪಿಸುತ್ತಾನೆ. ಕ್ಷಣದಲ್ಲಿ ಅಂಬಿ ಆತನ ಕಾಯಿಲೆ ಎಲ್ಲಾ

ಹೋಗಲಾಡಿಸುತ್ತಾಳೆ. ಆತ ಮೊದಲಿನಂತೆ ಆಗುತ್ತಾನೆ. ಆಗ ಆತನಿಗೆ ಮೊದಲಿನ ನೇನಪುಬರುತ್ತದೆ. ಆ ಸ್ಥಳದಲ್ಲಿ ನೇನಪು ಬರುತ್ತದೆ. ಆಗ ಆತನಿಗೆ ಇವಳೆ ಅಂಬಿ ಎಂದು ಗೋತಾಗುತ್ತದೆ. ನಂತರ ಅವಳ ಪಾದಹಿಡಿದು ನೀನು ಯಾರು ತಾಯಿ ಹೇಳು' ಎಂದು ಕೇಳುತ್ತಾನೆ. ಅದಕ್ಕೆ ಅಂಬಿ ನಗುತ್ತ ನಾನು ಭವಾನಿದೇವಿ ಇದಿದ್ದೇನೆ.

ನಿನ್ನ ಮನೆಯಲ್ಲಿ ಉಳಿದು ಈ ಸ್ಥಳದಲ್ಲಿ ಬಂದಿದ್ದೆನೆ ಎಂದು ಹೇಳುತ್ತಾಳೆ. ಅದಕ್ಕೆ ಗಾಣಗ ನಂತರ ಪಶ್ಚಾತಾಪ ಪಟ್ಟು ತನ್ನೂರಿಗೆ ಬರುತ್ತಾನೆ. ಬಂದ ನಂತರ ಅವಳ ಹೆಸರಿನ ಮೇಲೆ ಮೂರ್ತಿ ಸ್ಥಾಪಿಸಿದ. ನಂತರ ಈ ಸ್ಥಳದ ಕಡೆ ಕಾಕತೀಯರು ಕೋಟೆಕಟ್ಟಲು ಪ್ರಾರಂಭಿಸಿದರು. ಆ ಕೋಟೆ ಕಟ್ಟುತಾ ಇದ್ದಂತೆ ಬಿಳತ್ತಾನೆ ಇದ್ದಿತ್ತು. ಒಂದು ದಿವಸ ಕಾಕತೀಯ ಅರಸನ ತಾಯಿಯ ಕನಸ್ಸಿನಲ್ಲಿ ಭವಾನಿ ಬಂದು ಹೇಳುತ್ತಾಳೆ.

ನಾನು ಈ ಸ್ಥಳದಲ್ಲಿ ಮೊದಲೆ ಇದ್ದೇನೆ. ಮೊದಲು ನನ್ನ ಗುಡಿ ಕಟ್ಟಬೇಕು ನಂತರ ಕೋಟೆಯನ್ನು ಕಟ್ಟಲು ಪ್ರಾರಂಭಿಸಿದರೆ ಈ ಕೋಟೆ ನಿಲ್ಲುತ್ತದೆ. ಇಲ್ಲದಿದ್ದರೆ ಇಲ್ಲವೆಂದು ಹೇಳುತ್ತಾಳೆ. ಆಗ ಅರಸನ ತಾಯಿ ಮಗನಿಗೆ ಹೇಳುತ್ತಾಳೆ. ಮಗನು ನಂತರ ಮೊದಲು ಭವಾನಿ ಮಂದಿರವನ್ನು ಕಟ್ಟಿಸಿದನು ನಂತರ ಕೋಟೆಯನ್ನು ಕಟ್ಟಲು ಪ್ರಾರಂಭಿಸಿದ ಆವಾಗ ಕೋಟೆ ಕಟ್ಟುವುದು ನಿಂತಿತ್ತು. ಅಂದಿನಿಂದ ಕಾಕತೀಯ ಅರಸರು ಮನೆ ದೆವರು ಈ ಭವಾನಿಯನ್ನು ಪೂಜಿಸುತ್ತಿದ್ದರು. ಇಂದು ಕೂಡ ಈ ಭವಾನಿ ಮಂದಿರ ಅತ್ಯಂತ ಸುಂದರವಾಗಿದೆ.

**ದೇವಿಯ ಹಾಡು :**

ಬಾಳಹರಬಿಂಕಿ ನನ್ನ ತಾಯಿ ಬಾಳದಬಿಂಕಿ
ಕಾತೀಕರಾಜನ ಡೋಗಿಯ ತೆಗೆದು ಶಂಖಮಾಡಿದಳೆ
ಶಂಖವಮಾಡಿದಳೆ. ಉದಿಯಾರ ನೋಡ್ಯಾಳೆ.

ಕಾತಿಕ ರಾಜನ ಹಣೆಯಾರ ತೆಗೆದು ಹಣತಿಯ ಮಾಡ್ಯಾಳೆ
ಹಣತಿಯಮಾಡ್ಯಾಳೆ ಜೋತಹಚಿದಳೆ
ಬಾಹಳರ ಬೆಂಕಿ ನನ್ನ ತಾಯಿ ಬಹಳರ ಬೆಂಕಿ.
ಕಾತಿಕ ರಾಜನ ಕಣವತೆಗದಾಳೆ. ಕವಡಿಯ ಮಾಡ್ಯಾಳೆ.
ಕವಡಿಯ ಮಾಡ್ಯಾಳೆ. ಕೊರಳಲ್ಲಿ ದರಿಸ್ಯಾಳೆ
ಬಾಹಳರ ಬೆಂಕಿ ನನ್ನ ತಾಯಿ ಬಹಳರ ಬೆಂಕಿ.
ಕಾತಿಕ ರಾಜನ ಮೂಗವತೇಗದು ಮುಗರ ಮಾಡ್ಯಳೆ

ಮುಗರ ಮಾಡಿದಳೆ. ಬಾರಿಸಿನೋಡಿದಳೆ
ಬಾಹಳರ ಬೆಂಕಿ ನನ್ನ ತಾಯಿ ಬಾಹಳ ಬೆಂಕಿ.
ಕಾತಿಕ ರಾಜನ ಹಲವ ತೆಗೆದು ಮುತ್ತರ ಮಾಡ್ಯಾಳೆ
ಮುತ್ತಾರ ಮಾಡಿದಳೆ. ಕೊರಳಲ್ಲಿ ಧರಿಸ್ಯಾಳೆ
ಬಾಹಳರ ಬೆಂಕಿ ನನ್ನ ತಾಯಿ ಬಾಹಳರ ಬೆಂಕಿ

ಕಾತಿಕ ರಾಜನ ಮೊಳಕಾಲ ಓಡೆದು ರಕ್ತವತೆಗೆದ್ಯಾಳೆ
ರಕ್ತವತೆಗೆದಿದಳೆ. ಹಣೆಯಲ್ಲಿ ಧರಿಸಿದ್ಯಾಳೆ
ಬಾಹಳರ ಬೆಂಕಿ ನನ್ನ ತಾಯಿ ಬಾಹಳರ ಬೆಂಕಿ.

ಕಾತಿಕ ರಾಜನ ಚರ್ಮವ ತೆಗೆದು ಜಗ ಹೊಲಿಸಿದಳೆ
ಜಗ ಹೊಳಿಸಿದ್ದಾಳೆ ಮೈಯಲ್ಲಿ ತೋಟಿದಳ್ಯ
ಬಾಹಳರ ಬೆಂಕಿ ನನ್ನ ತಾಯಿ ಬಾಹಳರ ಬೆಂಕಿ.

## ಕೋಟೆ ಒಳಗಿನ ಪಾಂಡುರಂಗನ ಪಾದ ಕುರಿತ ಐತಿಹ್ಯ ಕಥೆ :

ಬಹಮನಿ ಅರಸರ ಆಳ್ವಿಕೆಯ ಕಾಲದಲ್ಲಿ ಬೀದರನಲ್ಲಿ ಬರಗಾಲ ಬಂದಿತ್ತು, ಮಳೆ, ಬೆಳೆ, ಇಲ್ಲದೇ ಊಟಕ ಏನ್ನು ಇರದೆ ಜನರು ಬಡತನದಲ್ಲಿದ್ದರು. ಆ ಸಮಯದಲ್ಲಿ ಬೀದರ ನಗರದಲ್ಲಿ ಒಬ್ಬ ಪಾಂಡುರಂಗನ ಭಕ್ತನಿದ್ದನು ಆತನು ಜನರಿಗೆ ದಿನಾಲು ಅನ್ನ ಬಟ್ಟೆ ಬೇಕಾದದನ್ನು ಜನರಿಗೆ ದಾನಮಾಡುತ್ತಿದ್ದ, ಆತನು ದಿನಾಲು ಎಷ್ಟು ಜನರಿಗೆ ಆಹಾರ ದಾನ ಮಾಡುತ್ತಿದ್ದ, ಎಲ್ಲ ಜನರು ಆತನನ್ನು ಅತ್ಯಂತ ಸಂತೋಷದಿಂದ ಗೌರವಿಸುತ್ತಿದ್ದರು. ಇತ ದಿನಾಲು ದಾನಮಾಡುತ್ತ ಇದನ್ನು ಆತನ ಹತ್ತಿರ ಕಡಿಮೆ ಆಗತ್ತಾ ಇರಲಿಲ್ಲ. ಪಾಂಡುರಂಗನ ಭಕ್ತನಾದ ಕಾರಣ ಜನರಿಗೆ ಸೇವೆಮಾಡುತ್ತಿದ್ದ ಪಾಂಡುರಂಗ ದೇವರು ಆತನಿಗೆ ಏನೂ ಕಡಿಮೆ ಮಾಡಲಿಲ್ಲ. ಆತ ಜನರಿಗೆ ಸಹಾಯ ಮಾಡತಾ ಇದ್ದಂತೆ ಆತನ ಹತ್ತಿರ ಇದ ವಸ್ತು ದವಸಧಾನ್ಯ ಎಲ್ಲ ಹಾಗೇ ಇರುತ್ತಿತ್ತು. ಇತ್ತನಲ್ಲಿಗೆ ದಿನಾಲು ಅನೇಕ ಜನರು ಅನೇಕ ಕಡೆಯಿಂದ ಬರುತ್ತಿದ್ದರು.

ಈ ವಿಷಯ ಕೋಟೆಯಲ್ಲಿನ ಬಹಮನಿ ಅರಸನಿಗೆ ತಿಳಿಯಿತ್ತು. ಆತನಿಗೆ ಇವನ ಮೇಲೆ ಅನುಮಾನ ಬಂತ್ತು. ಇಷ್ಟು ಸಂಪತ್ತು ದವಸ ಧಾನ್ಯ ಎಲ್ಲಿಂದ ಬಂತು, ಇತನ ಹತ್ತಿರ ಎಂದು ಯೋಚಿಸಿ. ಆ ಪಾಂಡುರಂಗ ಭಕ್ತನನ್ನು ಕೋಟೆಯ ಒಳಗ ಕರೆಸಿದ. ಅರಸ ಆತನಿಗಿ ಕೇಳತಾನ ನಿನ್ನು ಇಷ್ಟು ದಾನ ಎಲ್ಲಿಂದ ಮಾಡುತಿ ಜನರಿಗಿ. ನೀನು ಕಳ್ಳತನ ಮಾಡುತಿಯಾ ಅಥವಾ ನಿನ್ನ ಹತ್ತಿರ ಏನಾದರು ಚಮತ್ಕಾರ ಇದೆಯಾ ಹೇಳು ಎಂದು ಕೇಳುತ್ತಾನೆ. ಆಗ ಪಾಂಡುರಂಗನ ಭಕ್ತ ಹೇಳುತ್ತಾನ. ನನ್ನ ಹತ್ತಿರ ಯಾವ ಚಮತ್ಕಾರವಿಲ್ಲ ನಾನು ಕಳ್ಳತನಮಾಡುವುದಿಲ್ಲ. ನನ್ನ ತಂದೆ ಪಾಂಡುರಂಗ ಕೊಡುತ್ತಾನೆ. ಎಂದು ಹೇಳುತ್ತಾನೆ. ಅದಕ್ಕೆ ಅರಸ ನಂಬುವುದಿಲ್ಲ. ನಿನ್ನ ಪಾಂಡುರಂಗ ಹೇಗೆ ಕೊಡುತಾನ ನೋಡೋಣ ? ಎಂದು ಆ ಪಾಂಡುರಂಗನ

ಭಕ್ತನನ್ನು ಅರಮನೆಯ ಸೇರೆಯ ಮನೆಯಲ್ಲಿಟ್ಟಿದ್ದನು. ಅತ್ಯಂತ ಭದ್ರವಾಗಿ ಕತ್ತಲು ಕೋಣೆಯ ಒಳಗೆ ಇತನನ್ನು ಇಟ್ಟಿದನು.

ಇವಾಗ ಜನರಿಗಿ ಹೇಗೆ ದಾನ ಮಾಡತಿ ಎಲ್ಲಿ ಕೊಡತ್ತಿ ನಿನ್ನ ಹತ್ತಿರ ಏನಿದೆ. ಮೈ ಮೇಲೆ ಬಟ್ಟೆ ಇಲ್ಲ. ಕಾಲಲ್ಲಿ ಚಪ್ಪಲ್ಲಿ ಇಲ್ಲ ನೀ ಏನು ಜನರಿಗಿ ದಾನ ಮಾಡತಿ ಎಂದು ಅರಸ ಆತನಿಗಿ ಹಿಯಾಳಿಸುತ್ತಾನೆ.

ಆದರೆ ಪಾಂಡುರಂಗನ ಭಕ್ತ ನಗುತ್ತ ಸೇರೆಮನೆಯಲೇ ಪಾಂಡುರಂಗ ಪಾಂಡುರಂಗ ಎಂದು ಆತನ ಧ್ಯಾನದಲೇ ಮಗ್ನನಾಗಿದನು. ಇದೆಲ್ಲ ಕಂಡು ಪಾಂಡುರಂಗ ದೇವರು ತನ್ನ ಭಕ್ತನನ್ನು ಸೆರೆಮನೆಯಿಂದ ಬಿಡಿಸಲು ಯೋಚಿಸಿದ ನಂತರ ಪಾಂಡುರಂಗ ದೇವರು ತನ್ನ ಭಕ್ತನ ರೂಪದಲೇ ಈ ಬೀದರ ನಗರದ ಕೋಟೆಯ ಗುಂಬಜ ದ್ವಾರದಲ್ಲಿ ಬಂದು ನಿಂತು ಪಾಂಡುರಂಗ ಪಾಂಡುರಂಗ ಎನ್ನುತ್ತಿದದರು. ಇತನನ್ನು ಕಂಡು ಅರಸ ಆಶ್ಚರ್ಯನಾದನು. ಸೇರೆಮನೆಯಲ್ಲಿ ಕಟ್ಟಿ ಇಟ್ಟ ವ್ಯಕ್ತಿ ಹೇಗೆ ಬಿಡಿಸಿಕೊಂಡು ಬಂದ ಎಂದು ಚಿಂತಿಸಿ ಇಲ್ಲಿಗೆ ಹೇಗೆ ಬಂದಿದ್ದಿ ನಾನು ನಿನ್ನಗ ಸೇರೆ ಮನೆಯಲ್ಲಿಟ್ಟಿದ್ದೆ. ಎಂದು ಅರಸ ಕೇಳಿದನು. ಅದಕ್ಕೆ ಪಾಂಡುರಂಗ ದೇವರು ನಿನ್ನಗ ಬೆಳ್ಳಿ ಬಂಗಾರ ಆಸ್ತಿ ಬೇಕಾಗಿದೆ. ಅಲ್ಲವೇ ತೆಗೆದುಕೊ ನಿನ್ನ ಎಲ್ಲ ವಸ್ತು ಎಂದು ಪಾಂಡುರಂಗ ತನ್ನ ಚಮತ್ಕಾರದಿಂದ ಅರಸನ ಎದುರ ಅನೇಕ ನಾಣ್ಯಗಳನ್ನು ಚಲ್ಲಿದನು. ಇದನ್ನು ಕಂಡು ಅರಸ ಪಾಂಡುರಂಗನಿಗೆ ಹಿಡಿಯಿರಿ ಎಂದು ಸೇವಕರಿಗೆ ಹೇಳಿದನು. ಸೇವಕರು ಬರುವಷ್ಟರಲೇ ಪಾಂಡುರಂಗ ತನ್ನ ಬಲಗಾಲ ಕೋಟೆಯದ್ವಾರದಲ್ಲಿ ಎಡಗಾಲ ಶಹಗಂಜ ದ್ವಾರದಲ್ಲಿ ಇಟ್ಟಿದರು ಒಂದೇ ಹೆಜ್ಜೆಯಿಂದ ಇಲ್ಲಿಂದ ಹೋದರು.

ನಂತರ ಬಹಮನಿ ಅರಸ ಸೆರೆಮನೆಯಲ್ಲಿ ಹೋಗಿ ನೋಡುತ್ತಾನೆ. ಅಲ್ಲಿ ಪಾಂಡು ರಂಗನ ಭಕ್ತ ಪಾಂಡುರಂಗ ಪಾಂಡುರಂಗ ಎನ್ನುತ್ತಿರುತ್ತಾನೆ. ಅರಸನಿಗೆ ಆಶ್ಚರ್ಯವಾಗುತ್ತದೆ. ಒಬ್ಬ ವ್ಯಕ್ತಿ ಎರಡು ಸ್ಥಳದಲ್ಲಿ ಹೇಗೆ ಇರುತ್ತಾನೆ. ಎಂದು ತಿಳಿದು ಪಾಂಡುರಂಗನ ಭಕ್ತನಿಗೆ ಬಿಡುಗಡೆ ಮಾಡುತ್ತಾನೆ. ಆತನಿಗೆ ಕೇಳುತ್ತಾನೆ. ಅರಸ ಇವಾಗ ಹೊರಗಡೆ ಇದೇ ಮತ್ತೆ ಒಳಗಡೆ ಹೇಗೆ ಬಂದಿ ಎಂದಾಗ ಪಾಂಡುರಂಗನ ಭಕ್ತನಿಗೆ ಆಶ್ಚರ್ಯವಾಯಿತ್ತು. ಹೊರಗಡೆ ನಾನು ಬಂದಿಲ್ಲ ನನ್ನ ರೂಪ ವೇಶದಲ್ಲಿ ಬಂದವನು ನಿಮ್ಮಗೆ ಹಣ್ಣ ನೀಡಿದವನ್ನು ನನ್ನ ದೇವರಾದ ಪಾಂಡುರಂಗ ಸಾಕ್ಷತ ಇಲ್ಲಿಗೆ ಬಂದಿದ್ದಾರೆ ಎಂದು ಹೇಳಿದನು. ಆಗ ಅರಸ ಪಶ್ಚಾತಾಪ ಪಟ್ಟು ಆತನಿಗೆ ಬಿಡುಗಡೆ ಮಾಡಿದನು ಆಗ ಪಾಂಡುರಂಗನ ಭಕ್ತ ಪಾಂಡುರಂಗ ಪಾಂಡುರಂಗ ಎನ್ನುತ ಪಾದಯಾತ್ರೆ ಮಾಡುತ್ತ ಪಂಡಲಪುರಕ ಹೋದನು ಸಾಕ್ಷಾತ ಪಾಂಡುರಂಗ ದೇವರು ಬಂದು ನಿಂತ ತಮ್ಮ ಬಲಗಾಲ ಹೇಜೆಯ ಗುರುತ್ತು ಇಲ್ಲಿಯ ಕೋಟೆಯ ಒಳಗೆ ಇಟ್ಟಿದರು. ಇನ್ನೊಂದು ಗುರುತ್ತು ಶಾಹಗಂಜ ದರವಾಜದಲ್ಲಿದೆ. ಬಲಗಾಲ ಗುರುತು ಕೋಟೆಯ ಒಳಗೆ ಬಂದ ಗುರುತಾಗಿದೆ. ಶಾಹಗಂಜ ದರವಾಜದಲ್ಲಿ ಹೋಗುವ ಗುರುತ್ತಾಗಿದೆ.

ಇಂದು ಕೂಡ ಈ ಸ್ಥಳದಲ್ಲಿ ಆ ಗುರುತು ಇದೆ. ಇಂದು ಕೂಡ ಈ ಸ್ಥಳದಲ್ಲಿ ಜನರು ಪೂಜೆ ಮಾಡುತ್ತಾರೆ. ಶ್ರಾವಣದಲ್ಲಿ ಶಿವರಾತ್ರಿಯಲ್ಲಿ ಪಂಡಲಪುರದಿಂದ ಜನರು ಪಾದಯಾತ್ರೆ ಮಾಡುತ್ತ ಬಂದು ಈ ಕೋಟೆಯ ಒಳಗಿನ ಪಾಂಡುರಂಗನ ಪಾದದ ದರ್ಶನ ಮಾಡುತ್ತಾರೆ. ಭಜನೆ ಮಾಡುತ್ತಾನೆ. ಹಾಗೂ ಅನೇಕ ಜನರಿಗೆ ಊಟಕೂಡ ಹಾಕುತ್ತಾರೆ. ಊಟವನ್ನು ಕೋಟೆಯ ಒಳಗಿನ ರಜಪೂತ ಗಲ್ಲಿಯ ದೀಲಿಪ ಠಾಕೂರ ಹಾಕುತ್ತಾರೆ.

## ಕೋಟೆಯ ಒಳಗಿನ ಕೆರಯ ಕುರಿತ ಐತಿಹ್ಯ ಕಥೆ :

ಬೀದರ ಕೋಟೆಯಲ್ಲಿರುವ ಕೆರೆಯೊಂದು ಬೊಮ್ಮಗೊಂಡನ ಕೆರೆ ಎಂದೆ ಪ್ರಚಾರದಲ್ಲಿದೆ. ಬೀದರ ಕೋಟೆ ಹಾಗೂ ಈ ಕೆರೆಯನ್ನು ಹಿನ್ನೆಲೆ ಯಾಗಿಟ್ಟುಕೊಂಡು ಐತಿಹ್ಯವನ್ನು ಇಲ್ಲಿಯ ಜನಪದರು ಹೇಳುವರು. ಬೀದರ ಕೋಟೆ ನಿರ್ಮಾಣಕ್ಕೆ ಕಾರಣ ನಿರ್ಮಿಸಲು ಕೊಟ್ಟ ಸಹಕಾರ ಎಲ್ಲವೂ ಬೊಮ್ಮಗೊಂಡನ ಸುತ್ತ ಹಣೆದ ಐತಿಹ್ಯಗಳು ದಾಖಲೆಗಳನ್ನು ಒದಗಿಸುತ್ತವೆ. ಒಳಕೋಟೆಯಲ್ಲಿರುವ ಕೆರೆಯನ್ನು ಬೊಮ್ಮಗೊಂಡನ ಕೆರೆ ಎಂದೇ ಕರೆಯುವ ವಾಡಿಕೆ ಇದೆ. ಈ ಕೆರೆಯಲ್ಲಿ ನೀರು ಎಲ್ಲಿಂದ ಬರುತ್ತವೆ ಎನ್ನುವುದು ಯಾರಿಗೂ ತಿಳಿದಿಲ್ಲ. ಜೊತೆಗೆ ಇಲ್ಲಿನ ನೀರು ಎಂದು ಬತ್ತಿ ಹೋಗುವುದಿಲ್ಲ.

ಹಿಂದೆ ಒಂದನೊಂದು ಕಾಲದಲ್ಲಿ ಚಿಕ್ಕ ಕುಲುಮೆಯೊಂದಿತ್ತು. ಆ ಕುಲುಮೆಯಿಂದಲೇ ಬೊಮ್ಮಗೊಂಡ ನೀರಡಿಸಿ ಬಂದ ಅರಸನಿಗೂ ಹಾಗೂ ಅವನ ಸಹಸ್ರ ಸೈನಿಕರಿಗೆ ಕುದುರೆ ಆನೆಗಳಿಗೆ ಈ ಚಿಕ್ಕ ಕುಲುಮೆಯಿಂದಲೇ ನೀರನ್ನು ಕುಡಿಸಿದ ಎನ್ನುವುದು ಒಂದು ಐತಿಹ್ಯ ಇದೆ.

ಗುಲ್ಬರ್ಗಾದಿಂದ ಸುಲ್ತಾನ ಎ. ಅಹಮ್ಮದ ಶಾಹ ತನ್ನ ಸೈನ್ಯ ಸಮೇತವಾಗಿ ಭೇಟಿಯಾಡುತ್ತ ಬಿದಿರು ಘಟ್ಟ ( ಬೀದರ ) ಪ್ರದೇಶಕ್ಕೆ ತಲುಪಿದರು. ಅಲ್ಲಿಯ ಮೂಲಗಳನ್ನು ನೋಡಿ ಅವುಗಳ ಮೇಲೆ ಬೇಟೆ ನಾಯಿಗಳನ್ನು ಬೆನ್ನಟ್ಟಿಸಿದರು. ಆದರೆ ಆ ನಾಯಿಗಳಿಗೆ ಮೂಲಗಳು ಸುತ್ತುವರಿದು ಸಾಯಿಸಿದವು. ಇದನ್ನು ವೀಕ್ಷಿಸಿ ಎಲ್ಲರೂ ಆಶ್ಚರ್ಯಚಕಿತರಾಗಿ ವಿಚಿತ್ರ ಘಟನೆಯೆಂದು ನುಡಿಯಲಾರಂಬಿಸಿದ್ದರು. ಮಂತ್ರಿ ಮುಖ್ಯಸ್ಥರನು ಕರೆಯಿಸಿ ತಾನು ಕಂಡ ವಿಚಿತ್ರ ಘಟನೆ ಹೇಳಿ ಇದೇನು ಮಹಿಮೆ ! ಎಂದಾಗ ಗುಂಪು ಕೂಡಿದ ಜನರೆಲ್ಲ ಸುಲ್ತಾನ (ರಾಜ)ರೆ ಇದು ಬೇಡರ ಭೂಮಿ (ಅಂಜಿಕೆಯಿಲ್ಲದ ಗಂಡು ಭೂಮಿ) ಮಹಿಮೆಯ ಭೂಮಿ ಇಲ್ಲಿ ಒಂದು ಕೋಟೆ ಕಟ್ಟಬೇಕು ಎಂದು ವಿನಂತಿಸಿಕೊಳ್ಳುವಾಗ ಬಾದಶಹನು ಬೆಟ್ಟದ ಮೇಲಿನ ಮರಳಿನಲ್ಲಿ ಅಸುನೀಗಿದ್ದ ಬೇಟೆ ನಾಯಿಗಳನ್ನು ನೋಡಿ ತನ್ನ ಕುದುರೆಯ ಮೇಲೆರಿ ಸಾಯಿಸಿದ ಮೂಲಗಳನ್ನು ಬೆನ್ನಟ್ಟಿದರು. ಅವರ ಹಿಂದೆ ಮಂತ್ರಿಗಳು ಸೇನಾಪತಿಗಳು ಕಾಲಾಳುಗಳು ದಂಡು ಎಲ್ಲರೂ ಓಡಲಾರಂಬಿಸಿದರು. ಓಡಿ ಓಡಿ ಆಯಾಸವಾಗಿ ನೀರಡಿಕೆಯಿಂದ ನೀರು ಹುಡಕಲಾರಂಬಿಸಿದರು. ಬೇಸಿಗೆಯ ಬಿಸಿಲು ಬಹಲ ಇತ್ತು. ನೀರು ಎಲ್ಲಿಯೂ ಸಿಗಲಿಲ್ಲ. ಅಲ್ಲಿ ಒಬ್ಬ ಸಿಬಲ್ಲಿ ಸಾಹೇಬ ಎಂಬ ಫಕೀರ ನೀದನು ಆತನನ್ನು ಸೈನಿಕರು ಇಲ್ಲಿ ನೀರೆಲ್ಲಿವೆ ಎಂದು ಕೇಳುವರು. ಅದಕ್ಕೆ ಆತ. ಆ ಘಟದಾಗ ಒಬ್ಬ ಕುರಬ ಕುರಿ ಕಾಯುತ್ತಿದ್ದಾನೆ. ಆತನನ್ನು ಕೇಳಿರಿ ಆತ ನಿಮ್ಮಗೆ ನೀರೆಲ್ಲಿವೆ ಎಂದು ಹೇಳುತ್ತಾನೆ ಎಂದನು.

ಸೈನಿಕರು ಆಗ ಹುಡುಕುತ ಕುರಿಕಾಯುವ ಕುರುಬನ ಹತ್ತಿರ ಬಂದು ಈ ಸ್ಥಳದಲ್ಲಿ ನೀರು ಎಲ್ಲಿವೇ ಎಂದು ಕೇಳಿದರು ಆಗ ಆ ಕುರಬ ಅಲ್ಲಿ ಒಂದು ಬಂಡಿ ಕಲ್ಲು ಅದ ಸ್ವಲ್ಪ ಸ್ವಲ್ಪ ನೀರ ಬರತಾ ಇವೆ ಹೋಗಿ ಅಲ್ಲಿ ಕುಡಿರಿ ಎಂದರು. ಆ ಕುರುಬ ಭೊಮಗೊಂಡನಾಗಿದ್ದ. ಆಗ ಸೈನಿಕರು ನಾವು ಇಷ್ಟೆ ಜನರಿಲ್ಲ ನಾವು ಲಕ್ಷಗಟಲೇ ಇದ್ದಿವಿ ಆನಿ, ಕುದರಿ ಎಲ್ಲ ಇವೆ ಎಲ್ಲರು ನೀರಡಿಸಿದ್ದಾರೆ. ಇಷ್ಟ ಜನರಿಗಿ ಆಗಿ ಕುದರಿಗಿ ಆನಿಗಿ ನೀರು ಸಾಕಾಗಬೇಕು ಎಂದರು. ಸಾಕಾಗುತ್ತವೆ. ಹೋಗಿರಿ ಎಂದರು ಎಲ್ಲರು ನೀರಿನ ಕಡೆ ಹೋದರು.

ಬೊಮ್ಮಗೊಂಡ ಹೇಳಿದ ಹಾಗೆ ಅಲ್ಲಿ ಒಂದು ಬಂಡೆಕಲ್ಲು ಇತ್ತು ಅದು ಎಷ್ಟು ಹೋಳಸತಾ ಇದರು ಅದು ಹೋಳಲಿಲ್ಲ. ಆನಿ ಕುದರಿ ಎಲ್ಲದರಿಂದ ಸರಿಸಿದರು ಆ ಬಂಡಿ ಕಲ್ಲು ಸರಿಯಲಿಲ್ಲ. ನಂತರ ಮತ್ತನಾಲ್ಕೆದು ಜನ ಸೈನಿಕರು ಬೊಮ್ಮಗೊಂಡನ ಹತ್ತಿರ ಬರುತ್ತಾರೆ ಬಂದು ಹೇಳುತ್ತಾರೆ ಆ ಬಂಡಿ ಕಲ್ಲು ನಮ್ಮಿಂದ ಸರಸಲಾಕ ಆಗತಾ ಇಲ್ಲ ಆಗ ಬೊಮ್ಮಗೊಂಡ ಹೇಳತ್ತಾರ ನೀವು ಇಷ್ಟ ಜನ ಸರಿಸಲಾಕ ಆಗದಿದಾಗ ನಾನೊಬ್ಬನೆ ಹೇಗೆ ಸರಿಸಲಿ ಎಂದರು. ನಂತರ ಬಂಡೆಕಲ್ಲಿನ ಸ್ಥಳಕೆ ಬಂದರು. ಬಂದು ತನ್ನ ಹತ್ತಿರ ಇದ್ದ ಕುರಿ ಕಾಯುವ ಒಂದು ಬಡಗಿತಕ್ಕೊಂಡು ಆ ಬಂಡೆಕಲ್ಲಿನ ಕೆಳಗೆಹಾಕಿ ಎತ್ತಿದರು. ಆಗ ಆ ಬಂಡೆಕಲ್ಲು ಅಲ್ಲಿಂದ ಸರಿಯಿತು. ಆಗ ನೀರು ಜಾಸ್ತಿ ಬರುತ್ತಿದ್ದವು. ಇದು ನೋಡಿ ರಾಜ್ಯ ಸೈನಿಕರು ಎಲ್ಲರು ಆಶ್ಚರ್ಯವಾದರು. ಎಲ್ಲರು ನೀರು ಕುಡಿದು ತೃಪ್ತಿರಾದರು. ಆನೆ, ಕುದರೆ, ಸೈನಿಕರು ಎಲ್ಲರು ಕುಡಿದರು. ಎಲ್ಲರು ಕುಡಿದರು ನೀರು ಸರಿಯಲಿಲ್ಲ.

ನಂತರ ಅರಸ ಬೊಮ್ಮಗೊಂಡರಿಗೆ ಕೇಳತಾನ. ತಮ್ಮ ಹೆಸರೇನು ? ಈ ಸ್ಥಳಯಾರದು? ತಾವೊಬ್ಬರೇ ಇಲ್ಲಿ ದನಕುರಿಗಳನ್ನು ಕಾಯುತ್ತಿರಿ ನಮಗೇನು ತಿಳಿಯದು. ಎಲ್ಲ ಸತ್ಯಾಂಶ ತಿಳಿಹೇಳಿರಿ ಎಂದು ಕೇಳಿದಾಗ ಆಗ ಅವರು ನನ್ನ ಹೆಸರು ಬೊಮ್ಮಗೊಂಡ ಈ ಸ್ಥಳದಲ್ಲಿ ವೀರಸಂಗಯ್ಯಾ ಎಂಬ ಹಿಂದೂ ರಾಜರಿದ್ದರು. ಅವರು ಸಿದ್ದಿ ಪುರುಷರಾಗಿದ್ದು, ಪರಮೇಶ್ವರನ ಪರಮಭಕ್ತರಾಗಿದ್ದರು. ಅವರು ಅಪಾರ ಮಹಿಮಾವಂತರಾಗಿದ್ದರು. ಅವರ ಕಾಲದಲ್ಲಿ ಭಾಲ್ಕಿಯ ಚೌಳರಾವ ಕೋಹಿರದಲ್ಲಿ ಭಾಸ್ಕರರಾವ ಚಾಳಕಿಯಲ್ಲಿ ಜೋಳರಾವ ಚಿಂಚೋಳಿಯಲ್ಲಿ ಸಿಂಧೂ ಬಲ್ಲಾಳರಾವ ಮತ್ತು ಕಲ್ಯಾಣದಲ್ಲಿ ಬಿಜ್ಜಳರಾವರವರು ರಾಜರಿದ್ದರು. ಸುಃಖಿ ರಾಜ್ಯವಾಳುತ್ತಿದ್ದರು. ಎಲ್ಲರೂ ಐಕ್ಯರಾದರು ಇಲ್ಲಿ ಹೇಳಲಿಕ್ಕಾಗದಷ್ಟು ದೊಡ್ಡ ದೊಡ್ಡ ದೇವ ಸ್ಥಾನಗಳಿದ್ದವು. ನಾನೋಬ ಗೊಂಡ (ಕುರುಬ) ಕುರಿ ಕಾಯುತ್ತಾ ಬದುಕಿದ್ದೇನೆ. ತಾವೊಬ್ಬ ಬಾದಶಾಹ ಬಂದಿದ್ದರೆಂದು ಎಲ್ಲಾ ಸತ್ಯಾಂಶ ಹೇಳುತ್ತಿರುವೆ. ಈ ಮಾತ್ತೇಲ್ಲ ಕೇಳಿ ಬಾದಶಹಾ ಸಂತೋಷ ಗೊಂಡ ಮತ್ತು ಬೊಮ್ಮಗೊಂಡರಿಗೆ ತನ್ನ ಹತ್ತಿರ ಕೂಡಿಸಿಕೊಂಡು ಕೇಳಿದರು. ಈ ಭೂಮಿ ಈ ಸ್ಥಳ ಬಹಳ ಪುಣ್ಯ ಭೂಮಿಯಾಗಿದೆ. ಈ ಭೂಮಿಯ ಮೇಲೊಂದು ಕೋಟೆ ಕಟ್ಟಬೇಕೆಂದು ನನ್ನ ಮನಸ್ಸಿನಲ್ಲಿದೆ. ಅದಕ್ಕೆ ತಮ್ಮ ಮನಸ್ಸಿಗೆ ಹೇಗೆ ಅನ್ನಿಸುತ್ತದೆ. ಎಂದಾಗ ಬೊಮ್ಮಗೊಂಡರು ನಾನೊಬ್ಬ ಕುರಿಗಾಯಿ ನನಗೇನು ಕೇಳುವಿರಿ. ಶೀಘ್ರವೇ ಕಟ್ಟಲು ಆರಂಭಿಸಿರಿ ಎಂದರು. ಬಾದಶಾಹರು ಸ್ಥಳ ನೋಡಿ ಕೋಟೆ ಕಟ್ಟಲಾರಂಭಿಸಿದರು. ತದ ನಂತರ ಮುಸ್ಲಿಂಮರು ಅದಕ್ಕೆ ಜಾಪರಬಾದ ಎಂದರೆ ಹಿಂದುಗಳು ಬೀದರ ಕ್ವಾಟಿ ಎಂದು ಕರೆಯಲಾರಂಭಿಸಿದರು.

ಬೊಮ್ಮಗೊಂಡರು ಬಾದಶಾಹರಿಗೆ ಆ ಕುಮಡದ ಮೇಲೆ ಒಂದು ಕೆರೆ ಕಟ್ಟಿಸಿ ಅದರ ಹೆಸರು ಬೊಮ್ಮಗೊಂಡರ ಕೆರೆ ಎಂದಿಡಲು ಸಲಹೆ ಕೊಟ್ಟರು. ಆಗ ಬಾದಶಾಹನು ಕೋಟೆಯಲ್ಲಿ ಕೆರೆ ಕಟ್ಟಲು ಆರಂಭಿಸಿದರು. ಹಾಗೆಯೇ ಅದಕ್ಕೆ ಬೊಮ್ಮಗೊಂಡನ ಕೆರೆ ಎಂದು ಕೆರೆದರು. ಮೊದಲು ಆ ಕುಂಡದ ಹೆಸರು ವೀರಸಂಗಯ್ಯನ ಕುಂಡ ಎಂದಿದ್ದು, ಅಲ್ಲೊಂದು ದೊಡ್ಡ ದೇವಸ್ಥಾನ ಅದರ ಸುತ್ತಲು ಕೋಟೆ ಕಟ್ಟಲಾರಂಭಿಸಿದರು. ಕೋಟೆ ಪೂರ್ಣಗೊಳಿಸಲಾಯಿತು. ಈ ಬಲಾಢ್ಯರಾಜರಿಗೆ ಹಸನಗಂಗು ಬಹಮನಿ ಬಾದಶಾಹ ಸುಲ್ತಾನ-ಉ-ಅಹಮ್ಮದ ಶಾಹ ಎಂಬ ಹೆಸರಿಟ್ಟು ಕರೆಯಲಾರಂಭಿಸಿದರು.

ಇಂದು ಕುಡ ಈ ಕೆರೆ ಬೀದರ ಕೋಟೆಯ ಒಳಗೆ ನೊಡಲು ಸಿಗುತ್ತದೆ. ಬೊಮ್ಮಗೊಂಡೇಶ್ವರ ತನ್ನ ವಚನದಲ್ಲಿ ವೀರಸಂಗಯ್ಯ ನನ್ನು ತನ್ನ ಗುರು ಎಂಬುದಾಗಿ ತನ್ನ ವಚನಗಳಲ್ಲಿ ಹೇಳಿಕೊಂಡಿದ್ದಾನೆ. ಬೀದರನ ಒಳಕೋಟೆಯಲ್ಲಿರುವ ಬೊಮ್ಮಗೊಂಡನ ಕೆರೆಬಳಿ ವೀರ ಸಂಗಯ್ಯನ ದೇವಸ್ಥಾನವಿದೆ. ಬಹುಶ ಆ ದೇವಸ್ಥಾನದ ಸೇವೆ ಬೊಮ್ಮಗೊಂಡನೇ ಮಾಡುತ್ತಿದ್ದಿರ ಬಹುದು.

## ಆಧಾರ ಗ್ರಂಥಗಳು

1) ಬೊಮ್ಮಗೊಂಡೇಶ್ವರ - ಒಂದು ಅಧ್ಯಯನ. - ಸಂ. ಸುನೀತಾ ಬಾಬುರಾವ 2005

# ವಿದೇಶಿ ಪ್ರವಾಸಿಗರು ಕಂಡ ಬೀದರ

ಬೀದರ ಜಿಲ್ಲೆಗೆ ಅನೇಕ ವಿದೇಶಿ ಜನರು ಭೇಟಿ ನೀಡಿದ್ದಾರೆ. ತನ್ನ ವೈಭವದ ದಿನಗಳಲ್ಲಿ ಬೀದರ ಹೊರದೇಶಗಳೊಂದಿಗೆ ಇಟ್ಟುಕೊಂಡ ಸಂಬಂಧ ಇಂಡಿಯಾದ ಬೇರೆ ಯಾವ ರಾಜ್ಯಗಳಿಗೂ ಇರಲಿಲ್ಲ. ಬೀದರ ಮಧ್ಯ ಪ್ರಾಚ್ಯದ ದೇಶಗಳಾದ ಪರ್ಶಿಯಾ,ಟರ್ಕ, ಅರಬಸ್ತಾನಗಳೊಂದಿಗೆ ಇಟ್ಟುಕೊಂಡಿದ್ದ ಒಡನಾಟ ಅನನ್ಯ ಬೀದರ ಬಗ್ಗೆ ದೇಶಗಳಲ್ಲಿ ಇದ್ದ ಒಳ್ಳೆಯ ಅಭಿಪ್ರಾಯದ ಕಾರಣದಿಂದ ಹಲವಾರು ಪ್ರವಾಸಿಗಳು ಬೀದರಗೆ ಬಂದಿರುವ ಸಾಧ್ಯತೆಗಳಿವೆ. ಆ ಪ್ರವಾಸಿಗಳು ಬರೆದ ಅಥವಾ ದಾಖಲೆಗಳು ಪಾರಸಿ ಅರಬ್ಬಿ ಸೇರಿದಂತೆ ವಿವಿಧ ಭಾಷೆಗಳಲ್ಲಿ ಅಡಗಿವೆ ಅವುಗಳನ್ನು ಹೆಕ್ಕಿ ಹೊರತಗೆದರೆ ಬೀದರ ಭವ್ಯ ಇತಿಹಾಸವನ್ನು ಪುನರ ಸೃಷ್ಟಸಬಹುದು.

ವ್ಯಾಪಾರ ಆಡಳಿತಾತ್ಮಕ ವಿದ್ಯಾಭ್ಯಾಸಕ್ಕಾಗಿ ಧರ್ಮಗುರುವಿಗಾಗಿ ಬೀದರಗೆ ಭೇಟಿ ನೀಡಿ ಇಲ್ಲಿಯ ಜನರ ಬದುಕು ಜೀವನ ವಿಧಾನ ನಡವಳಿಕೆ ಇತಿಹಾಸ ನಂಬಿಕೆಗಳನ್ನು ಒಳಗೊಂಡಂತೆ ಹಲವು ಪ್ರವಾಸಿಗಳು ತಮ್ಮ ಅನುಭವ ಅಭಿಪ್ರಾಯಗಳನ್ನು ದಾಖಲಿಸಿದ್ದಾರೆ. ಅವರಲ್ಲಿ ರಷ್ಯ ಪ್ರವಾಸಿ ನಿಕಿಟನ ಫ್ರೆಂಚ ಪ್ರವಾಸಿಗಳಾದ ಜೇನಥೇನ ನಾಟ,ಥೆವರನ್ಯಾ ಪೋರ್ಚಗೀಸ ಪ್ರವಾಸಿ ಟಾಟ ಪಿರೇಸ್ ಇತಿಹಾಸಜ್ಞಫರಿಸ್ತಾ ಬ್ರಿಟಿಷ ಅಧಿಕಾರಿಗಳಾದ ಕರ್ನಲ್ ಮೇಕಂಜಿ ಮೇಂಡೊಸ ಟೇಲರ.

ಜೇನ ಥೆನನಾಟ ಇತ ಬೀದರ ಕೋಟೆಯ ಬಗ್ಗೆ ವಿವರವಾಗಿ ತನ್ನ ಪುಸ್ತಕದಲ್ಲಿ ದಾಖಲಿಸಿದ್ದಾನೆ. ಥೆವರನ್ಯ ಬೀದರ ಮೇಲೆ ಔರಂಗಜೇಬನ ನಡೆಸಿದ ದಾಳಿಯ ಬಗ್ಗೆ ದಾಖಲಿಸಿದ್ದಾನೆ.

ಫರಿಸ್ತಾ ತನ್ನ ಪುಸ್ತಕದಲ್ಲಿ ಬೀದರ ನಗರ ಮತ್ತು ಅದರ ಭೋಗೋಳಿಕ ಸೌಂದರ್ಯವನ್ನು ವಿವರಿಸಿದ್ದಾನೆ ಮತ್ತು ಬೀದರನ ತಂಪಾದ ಹವೆ ಝರಿಗಳ ಬಗ್ಗೆ ವಿವರವಾಗಿ ಬರೆದಿದ್ದಾನೆ ಮತ್ತು ಕಾಕತೀಯ ದೊರೆಗಳು ಕಟ್ಟಿದ ಬೃಹತ ಕೋಟೆಯ ನವೀಕರಣ ಬಗೆಗಿನ ಮಾಹಿತಿ ಫರಿಸ್ತಾನಿಂದ ದೊರೆಯುತ್ತದೆ. ಬೃಹತ್ ಮತ್ತು ಅಪರೂಪದ ತೋಪುಗಳೂ ಸೊಗಸಾದ ಅರಮನೆ ಮತ್ತು ನಗರದಲ್ಲಿ ಕಟ್ಟಡಗಳ ಬಗ್ಗೆಯೂ ಬರೆದಿದ್ದಾನೆ.

ಇತಿಹಾಸ ಮತ್ತು ಸ್ಮಾರಕಗಳಲ್ಲಿ ಆಸಕ್ತರಾಗಿದ್ದ ಕರ್ನಲ್ ಮೆಕೆಂಜಿ ಮತ್ತು ಮೆಡೋಸ್ ಟೇಲರ ಕೂಡ ಬೀದರ ನಗರ ಮಾತ್ರವಲ್ಲದೆ ಬಸವಕಲ್ಯಾಣ ಮತ್ತು ಹುಮನಾಬಾದಗಳಿಗೆ ಭೇಟಿ ನೀಡಿದ ತಮ್ಮ ಅನುಭವಗಳನ್ನು ಬರವಣಿಗೆಯಲ್ಲಿ ದಾಖಲಿಸಿದ್ದಾರೆ.

ರಷ್ಯದ ಪ್ರವಾಸಿ ನಿಕಿಟನ ಇಂದಿಗೆ ಸು. 525 ವರ್ಷಗಳ ಹಿಂದೆ ಭಾರತಕ್ಕೆ ಭೇಟಿ ನೀಡಿದ್ದ ಮೂರು ವರ್ಷ ಭಾರತದಲ್ಲಿ ಕಳೆದ ಅದರಲ್ಲಿ ನಾಲ್ಕು ತಿಂಗಳನ್ನು ಬೀದರಿನಲ್ಲಿ ಕಳೆದ ಅವನು ಬರೆದಿರುವ ಪ್ರವಾಸ ಕಥನ ಪುಸ್ತಕದಲ್ಲಿ ಬೀದರಿನಲ್ಲಿರುವ ಅವನ ಜೀವನಾನುಭಾವಗಳು ವಿಶೇಷವಾಗಿ ಉಲ್ಲೇಖಿಸಲ್ಪಟ್ಟಿವೆ.

ನಿಕಿಟನ ಬೀದರ ನಗರಕ್ಕೆ ಭೇಟ ಕೊಟ್ಟಾಗ ಅಲ್ಲಿ ಮಹಮ್ಮದಶಾಹ ತೃತೀಯನ ಆಡಳಿತವಿತ್ತು. ಇತನ ಮಂತ್ರಿ ಮಹಮ್ಮದ ಗವಾನನ ನಿಸ್ವಾರ್ಥ ದಕ್ಷ ಆಡಳಿತದಿಂದಾಗಿ ಬೀದರ ಅಂದು ಶಿಕ್ಷಣ ಕಲೆ ಹಾಗೂ ವಾಸ್ತು ಶಿಲ್ಪಗಳಲ್ಲಿ ಉಚ್ಛಯ ಸ್ಥಿತಿಯನ್ನು ತಲುಪಿತ್ತು. ಬೀದರಿನ ಮಹಮ್ಮದ ಗವಾನ ಮದರಸಾ ಒಂದು ಪ್ರಸಿದ್ದ ವಿದ್ಯಕೇಂದ್ರವಾಗಿತ್ತು. ಸೈನ್ಯ ಶಕ್ತಿಯ ದೃಷ್ಟಿಯಿಂದಲೂ ಅದೊಂದು ಅಜೇಯ ರಾಜ್ಯವೆನಿಸಿತ್ತು. ಇದೆಲ್ಲ ನಿಕಿಟನ ತನ್ನ ಪ್ರವಾಸನುಭಗಳಲ್ಲಿ ಉಲ್ಲೇಖಿಸಿದ್ದಾನೆ.

ನಿಕಟನನ ಪ್ರವಾಸನುಭವಗಳ ಸಾರಾಂಶದ ಸಂಕ್ಷಿಪ್ತ ಅನುವಾದ.

ಜನ್ನಾರದಿಂದ ನಾನು ದಖ್ಖನ್ನಿನ ದೊಡ್ಡ ನಗರವಾದ ಬೀದರಿನ ಕಡೆಗೆ ಪ್ರಯಾಣ ಬೆಳೆಸಿದೆ. ಅಲ್ಲಿಗೆ ತಲುಪಲು ನನಗೆ ಐದು ದಿವಸಗಳು ತಗಲಿದವು. ಈ ಎರಡು ನಗರಗಳ ಮಧ್ಯ ಅನೇಕ ಚಿಕ್ಕ ನಗರಗಳು ದೊರೆಯುತ್ತವೆ. ಸಾಮಾನ್ಯವಾಗಿ ಪ್ರತಿನಿತ್ಯ ಇಂತಹ ನಾಲ್ಕೈದು ನಗರಗಳನ್ನು ಹಾದು ಹೋಗುತ್ತಿದ್ದೆವು

ಬೀದರನಲ್ಲಿ ಕುದುರೆ ರೇಷ್ಮೆ ಟಫೆಲಾ ಹಾಗೂ ಅನೇಕ ಬಗೆಯ ವಸ್ತುಗಳು ಮಾರಾಟವಾಗುತ್ತವೆ. ಇಲ್ಲಿ ಗುಲಾಮರ ಮಾರಾಟವು ನಡೆಯುತ್ತದೆ. ಇಲ್ಲಿ ಮಾರಾಟವಾಗುವ ಎಲ್ಲ ವಸ್ತುಗಳು ಹೆಚ್ಚಾಗಿ ಸ್ವದೇಶಿ ವಸ್ತುಗಳಿಗೆ ಆಗಿದೆ. ಇಲ್ಲಿಯ ಜನ ಕಾಲ್ನಡಿಗೆಯಿಂದಲೆ ತಮ್ಮ ಪ್ರವಾಸ ಕೈಕೊಳ್ಳುವರು ಇವರ ನಡಿಗೆ ತುಂಬ ಚುರುಕು ಯುದ್ಧದಲ್ಲಿ ಆನೆ, ಕುದರೆ ಹಾಗೂ ಕಾಲ್ದಳ ಭಾಗ ವಹಿಸುತ್ತವೆ. ಕಾಲ್ದಳ ಎಲ್ಲಕು ಮುಂದೆ ಸಾಗುತ್ತದೆ. ಕವಚಧಾರಿಗಳಾದ ಪರ್ಷಿಯನ್ ಸೈನಿಕರೆ ಕುದರೆ ಸವಾರರು ಯುದ್ಧಕ್ಕೆ ಹೊರಡುವ ಮೊದಲು ಕುದರೆಗಳಿಗೂ ಕವಚಗಳನ್ನು ತೋಡಿಸಲಾಗುತ್ತದೆ. ಆನೆಯ ಸೊಂಡಿಲು ಮತ್ತು ಕೋರೆ ಹಲ್ಲಗಳಿಗೆ ಭಾರವಾದ ಖಡ್ಗಗಳನ್ನು ಕಟ್ಟುತ್ತಾರೆ. ಆನೆಯ ಮೇಲೆ ಕಟ್ಟಿದ ಅಂಬಾರಿಯಲ್ಲಿ ತೋಪು ಹಾಗೂ ಬಿಲ್ಲು ಬಾಣಗಳಿಂದ ಸುಸಜ್ಜಿತರಾದ ಹನ್ನೆರಡು ಕವಚ ದಾರಿಯಾದ ಯೋಧರು ಕುಳಿತುಕೊಳ್ಳುತ್ತಾರೆ.

ಬೀದರನಿಂದ 20 ಹರದಾರಿ ದೂರದಲ್ಲಿ ಎಳ್ಳಂದೂ ಎಂಬ ನಗರವಿದೆ. (ಬಹುಶ ಈಗಿನ ಆಳಂದ ಆಗಿರಬಹುದು.) ಅಲ್ಲಿ ಶೇಖ ಅಲ್ಲಾವುದ್ದಿನನ ಸಮಾದಿ ಇದೆ. ಅಲ್ಲಿ ಪ್ರತಿವರ್ಷ ಜಾತ್ರೆಯಗುತ್ತದೆ. ಜಾತ್ರೆ ಹತ್ತು ದಿವಸಗಳ ಕಾಲ ನಡೆಯುತ್ತದೆ. ಈ ಜಾತ್ರೆಗೆ ಭಾರತದ ಮೂಲ ಮೂಲೆಗಳಿಂದ ಜನ ಬರುತ್ತಾರೆ. ಈ ಜಾತ್ರೆಯಲ್ಲಿ ಪ್ರತಿವರ್ಷ ಸು. 20 ಸಾವಿರ ಕುದರೆಗಳು ಮಾರಾಟವಾಗುತ್ತವೆ. ಇದು ದಖ್ಖನ್ ಪ್ರಾಂತದ ಅತ್ಯಂತ ದೊಡ್ಡ ಜಾತ್ರೆಯಾಗಿದೆ. ಎಳ್ಳಂದೂದಲ್ಲಿ ಗೋಬೆಗಳು ಹೆಚ್ಚಾಗಿ ಕಂಡು ಬರುತ್ತವೆ. ಯಾರ ಮನೆಯ ಮೇಲೆ ಗೂಬೆ ಕುಳಿತು ಕುಗುತ್ತದೆಯೊ ಆ ಮನೆಯಲ್ಲಿ ಯಾರಾದರೂ ಮರಣ ಹೊಂದುತ್ತಾರೆ ಎಂಬುದನ್ನು ಇಲ್ಲಿಯ ಜನರ ನಂಬಿಕೆ ಇಲ್ಲಿ ಮಂಗಗಳ ಸಂಖ್ಯೆಯೂ ತುಂಬ ಹೆಚ್ಚು ಅವು ಅಡವಿಯಲ್ಲಿ ವಾಸಿಸುತ್ತವೆ. ಆಗಾಗ ಹಳ್ಳಿಗಳ ಮೇಲೆ ದಾಳಿ ಮಾಡುತ್ತವೆ. ಎರಗುತ್ತವೆ. ಮನೆಗಳನ್ನು ಹಾಳುಗೆಡವುತ್ತವೆ.

ಅವುಗಳಿಗೆ ತಮ್ಮದೆ ಆದ ಒಂದು ಭಾಷೆಯಿದೆ ಇಲ್ಲಿ ಕೆಂಪು ಮುಖದ ಕೋತಿಗಳನ್ನು ಹಿಡಿದು ಮಾರಾಟ ಮಾಡುತ್ತಾರೆ.

ನ್ನಾನು ಇಲ್ಲಿ ವಾಸಿಸುತ್ತಿದ್ದಾಗಲೆ ವಸಂತ ಋತುವಿನ ಆಗಮನವಾಗಿತು. ಇಲ್ಲಿ ಮಳೆಗಾಲ ಮತ್ತು ಚಳಿಗಾಲ ಪ್ರತಿಯೊಂದು ಮೂರು ಮೂರು ತಿಂಗಳ ಋತುಗಳಾಗಿವೆ. ಬೀದರ ಬಹಮನಿ ಮುಸ್ಲಿಂ ರಾಜ್ಯಧಾನಿಯಾಗಿದೆ. ಇದನ್ನು ಆಳುವ ಸುಲ್ತಾನ ಅಹಮ್ಮದ ಶಾಹ ತೃತೀಯನ್ನು 20 ವರ್ಷದ ತರುಣನಾಗಿದ್ದಾನೆ. ಉಳಿದ ಜಗೀರುದಾರರೆಲ್ಲ ಮುಸ್ಲಿಮರೆ ಆಗಿದ್ದು. ಅವರೆಲ್ಲ ಪರ್ಷಿಯನ್ನರೆ ಆಗಿದ್ದಾರೆ. ಮಹಮ್ಮದ ಶಾಹನ ಸೈನ್ಯದಲ್ಲಿರುವ ಸೈನಿಕರೆಲ್ಲ ಪರ್ಷಿಯಾದ ಖುರಾಸಾನ ಪ್ರದೇಶದವರಾಗಿದ್ದಾರೆ.

ಬೀದರನಲ್ಲಿ ಪ್ರಧಾನ ಮಹಮ್ಮದ ಗವಾನ ಇರುತ್ತಾನೆ. ಆತನ ಬಳಿಯಲ್ಲಿ ಎರಡು ಲಕ್ಷ ಸೈನವಿದೆ. ಸೇನಾಪತಿ ಮಲಿಕಖಾನನ ಬಳಿ ಒಂದು ಲಕ್ಷ ಸೇನೆ ಇದೆ. ಮತ್ತೋಬಸೇನಾ ಪತಿ ಪರಹಾದ ಖಾನನ ಹತ್ತಿರ 20 ಸಾವಿರ ಸೈನ್ಯವಿದೆ. ಸುಲ್ತಾನನು 3 ಲಕ್ಷ ಸೈನ್ಯದೊಂದಿಗೆ ಯುದ್ಧಕ್ಕೆ ಹೊರಡುತ್ತಾನೆ. ಇಲ್ಲಿ ಜನ ಸಾಂದ್ರತೆ ತುಂಬ ಹೆಚ್ಚಾಗಿದೆ. ಇಲ್ಲಿಯ ರೈತರು ತುಂಬ ಬಡವರಾಗಿದ್ದಾರೆ. ಆದರೆ ಜಹಗೀರದಾರರು ಶ್ರೀಮಂತರಾಗಿದ್ದಾರೆ. ಉಲ್ಲಾಸ ಜೀವನ ಸಾಗಿಸುತ್ತಾರೆ.

ಸುಲ್ತಾನ ವಿವಾಹಕ್ಕೆ ಹೊರಟಾಗ ತನ್ನ ತಾಯಿ ಹಾಗೂ ಬೇಗಂಗೆ ಕರೆದುಕೊಂಡ ಹೊರಡುತ್ತಾನೆ. ಆಗ ಸುಲ್ತಾನನ ಹಿಂದೆ 10 ಸಾವಿರ ಕುದರೆ ಸವಾರರು 50 ಸಾವಿರ ಕಾಲಳುಗಳು ಮತ್ತು ಸ್ವರ್ಣ ಕವಚವನ್ನು ಧರಿಸಿದ ಎರಡು ನೂರು ಆನೆಗಳು ಹೊರಡುತ್ತವೆ. ಅಲಂಕರಿಸಿದ ಮೂರುನೂರು ಕುದರೆಗಳು ನೂರು ದಾಸಿಯರು ಹೋರಡುತ್ತಾರೆ. ಸುಲ್ತಾನನ ಮುಂದೆ ವಾದಕರ ಮತ್ತು ನರ್ತಕ ನರ್ತಕಿಯರು ಸಾಗುತ್ತಾರೆ

ಸುಲ್ತಾನನ್ನ ಅರಮನೆಗೆ ಏಳು ಪ್ರವೇಶ ದ್ವಾರಗಳಿವೆ. ಪ್ರತಿಯೊಂದು ಪ್ರವೇಶ ದ್ವಾರದಲ್ಲೂ ನೂರುಜನ ಪಹರೆಯವರು ಮತ್ತು ನೂರು ಮುನ್ಶಿಗಳು ಇದ್ದಾರೆ. ಮುನಿಶ್ಷಿಗಳು ಒಳಗೆ ಹೂಗುವವರ ಮತ್ತು ಹೊರಗೆ ಬರುವವರ ವಿವರಗಳನ್ನು ಬರೆದುಕೊಳ್ಳುತ್ತಾರೆ. ವಿದ್ದೇಶಿಯರಿಗೆ ಅರಮನೆಯ ಪ್ರವೇಶಕ್ಕೆ ಅನುಮತಿ ದೊರೆಯುವುದಿಲ್ಲ. ಅರಮನೆ ತುಂಬ ಸುಂದರವಾಗಿದೆ. ಅದರ ಎಲ್ಲ ಗೋಡೆಗಳಗೆ ಸ್ವರ್ಣಲೇಪವಿದೆ. ಗೋಡೆಗಳನ್ನು ಸುಂದರವಾದ ಕುಸುರಿ ಕೆಲಸದಿಂದ ಅಲಂಕರಿಸಲಾಗಿದೆ. ಅರಮನೆಯ ಪ್ರತಿಯೊಂದು ಕಲ್ಲಿನ ಮೇಲೆ ಹೊಬಳ್ಳಿಯ ಚಿತ್ರಗಳನ್ನು ಕೆತ್ತಲಾಗಿದೆ. ಬೀದರ ನಗರದಲ್ಲಿ ನಾನು ನಾಲ್ಕು ತಿಂಗಳು ಇದೆ. ಅಲ್ಲಿ ನಾನು ಅನೇಕ ಹಿಂದೂಗಳೊಡನೆ ಪರಿಚಯ ಬೆಳೆಸಿದೆ. ನಾನು ಅವರಿಗೆ ಅವರ ಧರ್ಮದ ಬಗ್ಗೆ ಅನೇಕ ಪ್ರಶ್ನೆಗಳನ್ನು ಕೇಳಿದೆ.

## ಆಧಾರ ಗ್ರಂಥಗಳು


1) ಬೀದರ ಉತ್ಸವ ಸ್ಮರಣ ಸಂಚಿಕೆ - ಸಂ. ದೇವು ಪತ್ತ್ರ ವರದಿಗಾರರು ಪ್ರಜಾವಾಣಿ ಬೀದರ - 2006.

2) ಬೀದರ ಜಿಲ್ಲಾ ದರ್ಶನ - ಸಂ. ಡಾ।। ಜಗನ್ನಾಥ ಹೆಬ್ಬಾಳೆ.

# ಸಮಾರೋಪ

ಒಂದು ರೀತಿಯಲ್ಲಿ ಸಾಂಸ್ಕೃತಿಕ ಸಂಗಮ ರಾಷ್ಟ್ರ ಹಾಗೂ ರಾಜ್ಯದ ಪ್ರವಾಸಿ ನಕ್ಷೆಯಲ್ಲಿ ಬೀದರ ಜಿಲ್ಲೆ ತನ್ನದೇಯಾದ ವಿಶಿಷ್ಟ ಸ್ಥಾನವನ್ನು ಹೊಂದಿದೆ. ಕಟ್ಟಡ ವಾಸ್ತುಶಿಲ್ಪ, ಮಠ, ಮಂದಿರ, ಮಜೀದಿಗಳು ಕೇವಲ ಪ್ರೇಕ್ಷಣೀಯ ಸ್ಥಾನಗಳಾಗಿರದೆ. ಐತಿಹಾಸಿಕ ಧಾರ್ಮಿಕ ಸಮನ್ವಯದ ಜೀವಂತ ಸಾಕ್ಷಿಗಳಾಗಿವೆ. ವಿವಿಧ ಮತ ಪಂಥಗಳ ಈ ಸ್ಮಾರಕಗಳನ್ನು ನೋಡಲು ಬಂದ ಪ್ರವಾಸಿ ಇಲ್ಲಿಯ ಸಾಂಸ್ಕೃತಿಕ ಸ್ನೇಹವನ್ನು ವೀಕ್ಷಿಸಿ ಸಂತಸವನ್ನು ವ್ಯಕ್ತ ಪಡಿಸದೆ ಇರಲಾರ.

ಶತಶತಮಾನದ ಐತಿಹ್ಯ ಪಡೆದ ಬೀದರ ವಿವಿಧ ಜನಾಂಗ ಸಂಸ್ಕೃತಿಗಳ ಸಮ್ಮಿಲನದ ಸಂಕೇತ ಹಿಂದು, ಮುಸ್ಲಿಂ ಬಾಂಧವ್ಯದ ಕೇಂದ್ರ, ಮಹಾವಿಭೋತಿ ಪುರುಷರ ಪುಣ್ಯದ ನೆಲ ಉಜ್ವಲ ಧಾರ್ಮಿಕ ಕ್ಷೇತ್ರಗಳ ಪರಂಪರೆಯ ಪರಿಸರಹೊಂದಿದೆ. ಕಲೆ, ಸಾಹಿತ್ಯಗಳಿಗೆ ಅಪೂರ್ವ ಕಾಣಿಕೆ ನೀಡಿದೆ. ಕಲ್ಯಾಣದ ಚಾಲುಕ್ಯರು ಬಹಮನಿ ಬರೀದ ಶಾಹಿ ಮನೆತನಗಳ ಆಳಿದು. ಆರ್ಥಿಕ ಧಾರ್ಮಿಕ ರಾಜಕೀಯ ರಂಗಗಳಲ್ಲಿ ಜಗತ್ಪ್ರಸಿದಿಯನ್ನು ಗಳಿಸಿತ್ತು. ಅಂದಿನ ಸ್ಮಾರಕ ಕಟ್ಟಡ ಕಲೆ, ಸಾಹಿತ್ಯ, ಶಾಸನ ಮಂದಿರ ಮಜ್ಜೀದಗಳು ಇತಿಹಾಸದ ಸಾಕ್ಷಿ ಸಂಕೇತವಾಗಿ ಇಂದು ಕುಡ ನೋಡಲು ಬೀದರ ಜಿಲ್ಲೆಯಲ್ಲಿ ಸಿಗುತ್ತವೆ. ಶ್ರೀ ಬಸವಣ್ಣನವರ ನೇತೃತ್ವದಲ್ಲಿ ಭಕ್ತಿ ಚಳುವಳಿ ಸಾಮಾಜಿಕ, ಧಾರ್ಮಿಕ, ಕ್ರಾಂತಿಗೆ ಚಾಲನೆ ದೊರೆತದ್ದು ಇದೆ ನೆಲ, ಪ್ರಾಚೀನಕಾಲದಿಂದಲೂ ಇಲ್ಲಿಂದ ಜನರೆ ಅನೇಕರು ಇಲ್ಲಿಯೇ ನೆಲೆಸಿದ್ದಾರೆ. ಪರಿಣಾಮವಾಗಿ ಇಲ್ಲಿಯ ಜನ ಜೀವನ ಸಮೃಧಿಗೊಂಡಿದೆಯಲ್ಲದೆ ತನ್ನದೆ ಆದ ವೈಶಿಷ್ಟ್ಯ ಪಡೆದಿದೆ. ಇಡೀ ನಗರ ಎಂದು ರಷ್ಯನ ಪ್ರವಾಸಿ ನಿಕಿಟನ ಹೇಳಿದಾನೆ. ಬೀದರ ಜಿಲ್ಲೆ ಐತಿಹಾಸಿಕವಾಗಿ ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ವಾಸ್ತು ಶಿಲ್ಪದಿಂದ ತುಂಬ ಮಹತ್ವದಾಗಿದೆ. ಕೇವಲ ಬೀದರ ನಗರ ಮಾತ್ರವಲ್ಲ. ಈಗಿನ ಇಡಿ ಜಿಲ್ಲೆ ಸೇರಿದಂತೆ ಹಳೆಯ ಬೀದರ ಪ್ರಾಂತ್ಯ ಭಾರತದ ಇತಿಹಾಸದಲ್ಲಿ ಅತ್ಯಂತ ಮಹತ್ವದು ಅದರಲ್ಲಿ ದಕ್ಷಿಣ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂತಹದ್ದು.

ಐತಿಹಾಸಿಕವಾಗಿ ಬೀದರ ಜಿಲ್ಲೆಯು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ, ಬಹಮನಿ ಬರೀದ ಶಾಹಿಗಳ ಕಾಲದಲ್ಲಿ ಮೇರೆದ ನಾಡಾಗಿದೆ. ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲಕ್ಕೆ ಆದರಲೂ 6ನೇ ವಿಕ್ರಮಾದಿತ್ಯನ ಆಳ್ವಿಕೆಯ ಕಾಲದಲ್ಲಿ ಚಾಲುಕ್ಯ ಸಾಮ್ರಾಜ್ಯವು ಉನ್ನತಿಯ ಸಮೃದಿಯ ಶಿಖರಕ್ಕೇರಿತ್ತು. ಆಡಳಿತ, ಕಲೆ, ಸಾಹಿತ್ಯ, ಶಿಲ್ಪ ಮುಂತಾದವುಗಳಿಗೆ ದೊರೆತ್ತಿತ್ತು. ಬೀದರ ಜಿಲ್ಲೆಯಲ್ಲಿರುವ ಜಲಸಂಗಿ ಅದಕೊಂದು ಸಾಕ್ಷಿ ಆಗಿದೆ. ಸಾಹಿತ್ಯ ರಚನೆಯಲ್ಲಿ ವಿಜ್ಞಾನೇಶ್ವರ ಮಿತಾಕ್ಷರ ಸಂಹಿತ ಎಂಬ ಹಿಂದೂ ನ್ಯಾಯಶಸ್ತ್ರ ಗ್ರಂಥವನ್ನು ರಚಿಸಿದ. ವಿಕ್ರಮಾದಿತ್ಯನನು ಕುರಿತು ಬಾಯಿತುಂಬ ಹೋಗಳುತ್ತಾನೆ. ಬಿಜ್ಜಳನ ಕಾಲದಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆಯನ್ನು ಕಂಡ ಚಿರಸ್ಮರಣಿಯ ಕಾಲವಾಗಿತ್ತು. ಬಸವೇಶ್ವರ ಇತನ ಆಸ್ಥಾನದಲ್ಲಿದ ಬಸವಣ್ಣನವರು ಕಲ್ಯಾಣದಲ್ಲಿ ಧಾರ್ಮಿಕ ಸಾಮಾಜಿಕ,

ಆಧ್ಯಾತ್ಮಿಕ ಕ್ರಾಂತಿ ಮಾಡಿದರು ಧರ್ಮದ ಹೆಸರಿನಲ್ಲಿ ನಡೆಯುತ್ತಿದ ಶೋಷಣೆಯನ್ನು ಹೊಗಲಾಡಿಸಲೆತ್ನಿಸಿದರು. ಕಲ್ಯಾಣ, ಸಾಮಾಜಿಕ, ಧಾರ್ಮಿಕ, ಚಟುವಟಿಕೆಗಳ ಕೇಂದ್ರವಾಗಿತ್ತು. ಅನುಭವ ಮಂಟಪ ಸ್ಥಾಪನೆ ಆಯಿತ್ತು. ಆದರಲ್ಲಿ ಅನೇಕ ಶರಣ ಶರಣೆಯರು ಅನೇಕ ಕಡೆಯಿಂದ ಬಂದು ಸೇರುತ್ತಿದ್ದರು. ವಚನ ಸಾಹಿತ್ಯ ಬೆಳೆಯಿತು. ಜನಮನಕೆ ನೆಲೆ ದೊರಕಿತ್ತು. ಬಸವಣ್ಣನವರು ಜಾತಿ ಬೇಧ ವಿರೋಧಿಸಿ ಸಾಮಾಜಿಕ ಅನಿಷ್ಟಗಳ ವಿರುದ್ಧ ಕ್ರಾಂತಿಯನ್ನು ಆರಂಭಿಸಿದರು. ಸ್ತ್ರಿಯರಿಗೆ ಗೌರವ ಕೊಟ್ಟಿದರು. ಕಾಯಕ ತತ್ವಕ್ಕೆ ಮಹತ್ವ ನೀಡಿದರು.

ಬಹಮನಿ ಅರಸರು ಬೀದರ ಕೋಟೆ ಸ್ಥಾಪಿಸಿ, ಇಲ್ಲಿ ಅನೇಕ ರೀತಿಯಲ್ಲಿ ತಮ್ಮ ಕಾರ್ಯಮಾಡಿದರು. ವಾಸ್ತು ಶಿಲ್ಪರಚನೆ ಕಟ್ಟಡಗಳ ನಿರ್ಮಾಣ ಮಾಡಿದ್ದಾರೆ. ಬೀದರನಲ್ಲಿ ಕಾಕತೀಯರು ನಿರ್ಮಿಸಿದ್ದ ಚಿಕ್ಕದಾದ ಕೋಟೆಯನ್ನು ಬಹಮನಿ ವಂಶದ 9ನೇ ರಾಜ್ಯ ಅಹಮದ ಶಾ ವಲಿಯು ಪುನಃ ನಿರ್ಮಿಸಿದ ಐದು ಕಿ.ಮೀ. ವ್ಯಾಪ್ತಿಯನ್ನು ಆವರಿಸಿದ ಈ ಕೋಟೆ ಇಂದಿಗೂ ತನ್ನ ಭದ್ರತೆಯನ್ನು ಉಳಿಸಿಕೊಂಡಿದೆ. ಇಡೀ ಭಾರತದಲ್ಲೇ ಅತ್ಯಂತ ಸುವ್ಯವಸ್ಥಿತ ಕೋಟೆಗಳಲ್ಲೊಂದು ಎಂಬ ಹೆಗ್ಗಳಿಕೆಯೂ ಇದಕ್ಕಿದೆ. ಇನ್ನೂ ವಿಶೇಷವೆಂದರೆ ವೈರಿಗಳಿಂದ ರಕ್ಷಿಸಿಕೊಳ್ಳಲು ಕೋಟೆಯ ಸುತ್ತ ಮೂರು ಹಂತಗಳ ಆಳವಾದ ಕಂದಕಗಳು ನಿರ್ಮಿಸಿರುವುದು ಇಡೀ ಭಾರತದಲ್ಲಿ ಇಂತಹ ಕಂದಕಗಳು ಕಂಡು ಬಂದಿಲ್ಲ. ಇದು ಬೀದರದಲ್ಲಿ ಕಂಡುಬರುತ್ತದೆ. ಈ ಕೋಟೆಯ ಮಡಿಲಲ್ಲಿ ಬಹಮನಿಗಳ ಅರಮನೆ ದರ್ಬಾರು ನಡೆಸುವ ದೀವಾನ ಎ.ಎಮ್.ಹಾಲ್ ಗಗನ್ ಮಹಲ್ ರಂಗಿನ ಮಹಲ್ ಇವು ಮುತ್ತು ರತ್ನ ಮುಂತಾದ ಅಮೂಲ್ಯ ವಸ್ತುಗಳಿಂದ ಅಲಕೃತಗೊಂಡಿದ್ದ ಈ ಅರಮನೆ ಮತ್ತೊಂದು ಸೋಲಾಕಂಬ ಮಸೀದಿ ಭಾರತದಲ್ಲೇ ಅತ್ಯಂತ ದೊಡ್ಡ ಮಸೀದಿಗಳಲ್ಲೊಂದು ಆಗಿದೆ.

ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಕಟ್ಟಡಗಳು ಹಳದಿ ಮಿಶ್ರಿತ ಕೆಂಪು ಮರಳು ಕಲ್ಲಿನ ಒರಟು ಮಾಧ್ಯಮದಲ್ಲಿ ನಿರ್ಮಾಣಗೊಂಡಿರುವಂತೆ ಹಲವು ದೇವಲಾಯಗಳು ಒರಟು ಕಲ್ಲಿನ್ನು ಬಿಟ್ಟು ಕೇತ್ತನೆಯ ಕೆಲಸಕ್ಕೆ ಹೊಂದಿಕೊಳ್ಳಬಲ್ಲ ಕಲ್ಲುಗಳನ್ನು ಪಡೆದು ನಿರ್ಮಿತವಾಗಿವೆ. ಈ ಎರಡೂ ಮಾದರಿಯ ರಚನೆಗಳು ಚಾಲುಕ್ಯರ ವಾಸ್ತುಶಿಲ್ಪ ಶೈಲಿಯ ಕಾಣಿಕೆಗಳೆನ್ನಬಹುದು ಕೋಟೆ ನಾರಾಯಣಪೂರ ಜಲಸಂಗಿ, ಮುಸ್ಲಿಂ ನವಾಬರಗಳ ಪೀರಾನ ದರ್ಗಾಗೋರಿಗಳು ಮುಸ್ಲಿಂ ಶೈಲಿಯ ವಾಸ್ತುಗಳು ಬಿಜ್ಜಳನ ಕಾಲದ ಶಿವಶರಣರ ವಾಸದ ಮನೆಗಳಾಗಿರುವ ಗುಹೆಗಳು ವಾಸ್ತು ರಚನೆಯಲ್ಲಿ ಹಿಂದಿನ ಗುಹಾಂತರ ದೇವಾಲಯಗಳ ರೀತಿಯವು ಗಟ್ಟಿಯಾದ ಗುಡ್ಡವನ್ನು ಕೊರೆದ ವಾಸಿಸಲು ಯೊಗ್ಯ ರೀತಿಯಲ್ಲಿ ನಿರ್ಮಿಸಲಾಗಿರುವ ಅವು ಪ್ರವಾಸಿಗರ ಮನ ತಣಿಸುತ್ತವೆ. ಬೀದರ ಕೋಟೆ ಆ ಕಾಲದ ವಾಸ್ತು ರಚನೆಯ ಕೋಟೆಯ ಒಳಗೆ ಹಲವು ಬಣ್ಣದ ಆ ಕೃತಿಗಳನ್ನು ಹೊಂದಿವೆ. ಗುಮ್ಮಟಗಳ ಒಳಭಾಗದ ಕೆಲವು ರೀತಿಯ ಬಳಿಗಳಿಂದ ರೇಖಾಕೃತಿಗಳಿಂದ ಅಲಂಕೃತಗಳಿಂದ ಸೊಗಸಾಗಿ ಕಾಣುತ್ತವೆ. ಅಷ್ಟೂರಿನ ಗುಮ್ಮಜಗಳು ಉನ್ನತ ಭವ್ಯವು ಆಗಿದೆ. ಮದರಸಾ ವಿದ್ಯಾಲಯ ಆ ಕಾಲದ ಕಟ್ಟಡ ರಚನೆಯ ವಿನ್ಯಾಸವನ್ನು ಸೌಂದರ್ಯ ಪ್ರಜ್ಞೆಯನ್ನು

ಮೈಬಿಚ್ಚಿ ತೋರಿಸುತ್ತದೆ. ಮಿನಾರದ ಮೇಲೆ ಈಗ ಹಲವು ರೀತಿಯಲ್ಲಿ ಬಿಡಿಸಿದ ಬಣ್ಣ ಬಣ್ಣದ ಸೂಡುಚಿತ್ರಗಳು ನೋಡಲು ಸೀಗುತ್ತವೆ. ಇದೆಲ್ಲ ಬೀದರ ಜಿಲ್ಲೆಯ ವಾಸ್ತು ಶಿಲ್ಪದ ಸಾಕ್ಷಿ ಸಂಕೇತವಾಗಿ ಇವೆ. ಜಲಸಂಗಿಯ ಕಲ್ಲೇಶ್ವರ ದೇವಾಲಯದ ಅತ್ಯಂತ ಪ್ರಸಿದ್ದವಾಗಿದೆ. ಇದು ಕಲೆಯ ಕಣಜವೇ ಆಗಿದೆ.

ಬೀದರ ಜಿಲ್ಲೆಯ ಧರ್ಮ ಮತ್ತು ಸಂಸ್ಕೃತಿಯ ಬಗ್ಗೆ ಒಂದು ಮಹತ್ವದ ಅಂಶವೆಂದರೆ ಇಲ್ಲಿ ಕಾಣುವುದು. ಏಕತೆಯಲ್ಲಿ ಆನೇಕತೆ ಅನೇಕತೆಯಲ್ಲಿ ಏಕತೆ ಅನೇಕ ಮತ, ಪಂಥಗಳು ಪ್ರಾಚೀನ ಕಾಲದಿಂದಲೂ ಈ ಜಿಲ್ಲೆಯಲ್ಲಿ ಆಚರಿಸಲ್ಪಟ್ಟದರಿಂದ ವಿವಿಧ ಧರ್ಮದವರು ವಿಭಿನ್ನ ಸಂಸ್ಕೃತಿ ಜನರ ಬದುಕು ಇಲ್ಲಿ ಬೆಳಕಾಗಿ ನಿಂತಿದೆ. ಹಿಂದೂ ಮುಸ್ಲಿಂ ಸಂಸ್ಕೃತಿಗಳ ಸಮ್ಮಿಲನ ಈ ಜಿಲ್ಲೆಯ ಧಾರ್ಮಿಕ ಸಂಸ್ಕೃತಿಗೆ ಒಂದು ಹೆಗುರುತು. ಇದು ಈ ಜಿಲ್ಲೆಯ ವೈಶಿಷ್ಟವು ಆಗುವುದು. ಬೌದ್ಧ, ಜೈನ, ಶೈವ, ವೀರಶೈವ ಇಸ್ಲಾಂ ಮತ್ತು ಸಿಖ್ಖ, ಕ್ರೈಸ್ತ ಎಲ್ಲ ಜಾತಿ ಜನಾಂಗದವರು ಈ ಜಿಲ್ಲೆಯಲಿದ್ದು ಎಲ್ಲರು ತಮ್ಮ ನಡೆ ನುಡಿಗಳು ಬೇರೆ ಬೇರೆಯಾಗಿ ಕಂಡುಬಂದರು ಕೂಡ ಈ ಮತ ಧರ್ಮಗಳ ಹಿಂದಿರುವ ಉದ್ದೇಶ ಮಾತ್ರ ಒಂದೆಯಾಗಿದೆ. ಒಂದು ಊರಿಗೆ ಹೋಗಲು ಹಲವಾರು ರಸ್ತೆಗಳಿದ್ದರು. ಅವೆಲ್ಲವುಗಳು ತಲಪುವದು ಮಾತ್ರ ಆದೇ ಊರನ್ನು ಈ ರೀತಿ ಬೀದರ ಜಿಲ್ಲೆಯಲ್ಲಿ ಅನೇಕ ಮತದವರು ಹಲವಾರು ಧರ್ಮಗಳ ಪ್ರಚಾರ ಪ್ರಭಾವ ಇದ್ದರೂ ಕೂಡ ಅವರಲ್ಲಿ ಐಕ್ಯತೆ ಕಂಡುಬರುತ್ತದೆ.

ಹಿಂದೂ ಮುಸ್ಲಿಂ ಭಾಯಿ ಭಾಯಿ ಸಂಬಂಧ ಇಲ್ಲಿ ಇಂದಿಗೂ ಉಳಿದುಕೊಂಡು ಬಂದಿದೆ. ಈ ಜಿಲ್ಲೆಯ ಸಂಸ್ಕೃತಿ ಅರಳಿ ನಿಂತಿದೆ. ಈ ಜನರ ಧಾರ್ಮಿಕ ಸಹಿಷ್ಣು ಪರಂಪರೆ ಈ ಜಿಲ್ಲೆಯ ಸಾಂಸ್ಕೃತಿಕ ಹಿರಿಮೆಗೆ ಹೆಚ್ಚಿನ ನಂದಾ ದೀಪವಾಗಿದೆ. ಶರಣರ ಸಂಸ್ಕೃತಿಯ ಪ್ರಭಾವ ಮಹತ್ವವನ್ನು ಹೊತ್ತು ನಿಂತ ಬೀದರ ಜಿಲ್ಲೆ ಈ ದೃಷ್ಟಿಯಿಂದ ಅತ್ಯಂತ ಪ್ರಮುಖ ಸ್ಥಾನ ಪಡೆಯುತ್ತದೆ. ಶಿವಶರಣರು ನಡೆದಾಡಿದ ಈ ಜಿಲ್ಲೆಯನೆಲ್ಲ ಪವಿತ್ರವಾದದ್ದು ಸಕಲ ಮತ ಪಂಥದವರನ್ನು ಒಂದುಗೂಡಿಸಿ ಕೊಂಡು ಒಕ್ಕಟ್ಟಿನಿಂದ ಹೋರಾಟ ಮಾಡಿದ ಅವರ ಪ್ರಯತ್ನ ಈ ಜಿಲ್ಲೆಯ ಇಂದಿನ ಜನತೆಗೆ ಆದರ್ಶಮಯವಾಗಿದೆ. ಆ ಭವ್ಯ ಸಂಸ್ಕೃತಿಯ ಬೆಳಕಿನಲ್ಲಿ ಈ ಜಿಲ್ಲೆ ಬೆಳಗ ಹತ್ತಿದೆ. ಇಸ್ಲಾಂ ಜನರ ತಮ್ಮದೆ ಆದ ನಿಯಮಾಚರಣೆಗಳು ಇದ್ದರೂ ಇಲ್ಲಿಯ ಜನತೆಯೊಂದಿಗೆ ಕೂಡಿ ಬಾಳ ಹತ್ತಿದ್ದಾರೆ. ಬಹಮನಿ ಸುಲ್ತಾನರ ಕಾಲದಲ್ಲಿ ಬೀದರ ನಗರ ಸೂಫಿ ಸಂತರ ಪ್ರಸಿದ್ಧ ಕೇಂದ್ರವಾಗಿತ್ತು. ಬಂದೆ ನವಾಜ ಅಹಮ್ಮದ ಶಾಹನು ಗುರುವಾಗಿದ್ದ. ಈ ಬಹಮನಿ ಅರಸರಕಾಲಕ್ಕೆ ವಿದೇಶಿಗಳಿಂದ ಸುಪ್ರಸಿದ್ಧ ಸೂಫಿ ಸಂತರು ಬೀದರಕ್ಕೆ ಬಂದರು. ಇರಾಣ ದೇಶದಿಂದ ಕೀರ್ಮಾನದಿಂದ ಬಂದ ಸೂಫಿ ಸಂತ ಬೀದರ ಸುಲ್ತಾನರ ಆಶ್ರಯ ಪಡೆದು. ನಂತರ ಇಲ್ಲೆ ಉಳಿದು. ಇಸ್ಲಾಂ ಮತದ ತತ್ವಗಳನ್ನು ದಕ್ಷಿಣ ದೇಶದಲ್ಲೆಲ್ಲಾ ಪ್ರಸಾರ ಮಾಡಿದರು. ಒಬ್ಬನೆ ದೇವರು ಆತನೆ ಅಲ್ಲಾ, ಆತನಲ್ಲಿ ನಂಬಿಕೆ ಇಡಬೇಕು. ಎಲ್ಲರೊಡನೆ ಪ್ರೀತಿಯಿಂದಿರ ಬೇಕು. ತ್ಯಾಗಮಯಿ ಆಗಿರಬೇಕು. ಇವು ಅವರ ಹೇಳಿಕೆಗಳಾಗಿದ್ದವು. ಬಸವ ಕಲ್ಯಾಣ ತಾಜುದ್ದೀನ ಭಾಲ್ಕಿ ತಾಲೂಕಿನ ಘೋಡವಾಡಿಯ ಸಯ್ಯದ ಇಸ್ಮಾಯಿಲ್ ಖಾದ್ರಿ ಬೀದರದ ಮುಲ್ತಾನಿ ಪಾಶ ಅಬ್ದುಲ್ ಫೆಜ ದರ್ಗಾ

ಮುಂತಾದ ಪ್ರಸಿದ ಸೂಫಿ ಸಂತರು ಇಲ್ಲಿಯ ಭಾಗದ ಜನರ ಮೇಲೆ ಇಸ್ಲಾಂ ಮತದ ಪ್ರಭಾವ ಬೀರಿದರು ಅಂದಿನ ಆ ಪರಂಪರೆಯನ್ನು ಈ ಜಿಲ್ಲೆಯಲ್ಲಿ ಇಂದಿಗೂ ಕಾಣಬಹುದಾಗಿದೆ.

ಹಿಂದುಗಳು ಮುಸ್ಲಿಂರ ಹಬ್ಬ ಜಾತ್ರೆಮಾಡುತ್ತಾರೆ. ಅಷ್ಟೂರಿನ ಅಲ್ಲಂಪ್ರಭು ಜಾತ್ರೆ ಉದಾಹರಣೆಯಾಗಿದೆ. ಹಾಗೂ ಮೊಹರಂ ಹಬ್ಬ ಇಲ್ಲಿಯ ಹಿಂದು ಮುಸ್ಲಿಂ ಎಲ್ಲ ಜನರು ಈ ಹಬ್ಬ ಆಚರಿಸುತ್ತಾರೆ. ಇದು ಇಲ್ಲಿನ ಸಂಸ್ಕೃತಿಯ ಪರಂಪರೆಯಾಗಿದೆ. ಆಬ್ದುಲ್ ಫೇಜ ದರ್ಗಾ ಮುಲ್ತಾನಿ ಪಾಶ ದರ್ಗಾಗಳಿಗೆ ಹಿಂದುಗಳು ಇಂದು ಕೂಡ ಹೋಗುತ್ತಾರೆ.

ಬೀದರ ಜಿಲ್ಲೆ ಅತ್ಯಂತ ಪವಿತ್ರವಾದ ಧಾರ್ಮಿಕ ಕ್ಷೇತ್ರ ಸ್ಥಳಗಳ ನಾಡಾಗಿದೆ. ಸಿಖ್ಖರ ಪವಿತ್ರ ಕ್ಷೇತ್ರ ಸ್ಥಳ ಗುರುನಾನಕ ಬೀದರ ಜಿಲ್ಲೆಯಲ್ಲಿ ಸಿಖ್ಖ ಜನರ ಯಾತ್ರ ಸ್ಥಳವಾಗಿದೆ. ಇದು ಬಿದರ ಜಿಲ್ಲೆಯನ್ನು ಎರಡನೇ ಪಂಜಾಬ ಎಂದು ಹೆಳಲಾಗಿದೆ. ಹಾಗೂ ನರಸಿಂಹ ಝರನಾ ಹಿಂದೂಗಳ ಪವಿತ್ರವಾದ ಕ್ಷೇತ್ರ ಸ್ಥಳವಾಗಿದೆ. ಇಲ್ಲಿಗೆ ಜನರು ಸದಾ ದಿನಾಲು ಬರುತ್ತಾರೆ. ಹಾಗೂ ನರಸಿಂಹ ಝರನಾ ಗವಿ ನೋಡಲು ಹೆಂತವರನ್ನು ಆಶ್ಚರ್ಯ ಮುಡಿಸುತ್ತದೆ. ಪಾಪನಾಶಿನಿ ಮಂದಿರಕೂಡ ಬೀದರ ಜಿಲ್ಲೆಯ ಅತ್ಯಂತ ಪ್ರಾಚೀನ ಕ್ಷೇತ್ರ ಸ್ಥಳವಾಗಿದೆ. ಬೀದರ ಜಿಲ್ಲೆಯಲ್ಲಿ ಸಾಕ್ಷಾತ ದೇವರಗಳು ಬಂದು ಹೊಂದಂತಹ ನೆಲವಾಗಿದೆ. ಅವರು ಇಲ್ಲಿಗೆ ಬಂದು ಹೋದಂತಹ ತಮ್ಮ ಸಾಕ್ಷಿಯ ಗುರುತು ಇಲ್ಲಿ ಸ್ಥಾಪಿಸಿ ಇಟ್ಟುಹೋಗಿದ್ದಾರೆ. ಸೂರ್ಯ ಚಂದ್ರ ಇರುವತನಕ ಅವರು ಸ್ಥಾಪಿಸಿದಂತಹ ಸ್ಥಳಗಳು ಎಂದಿಗೂ ಬದಲಾವಣೆ ಹೊಂದುವದಿಲ್ಲವೆಂದು ಅವರೆ ಹೇಳಿದ್ದಾರೆ. ಬೀದರ ಜಿಲ್ಲೆ ಧಾರ್ಮಿಕವಾಗಿ ಐತಿಹಾಸಿಕವಾಗಿ ಸಾಂಸ್ಕೃತಿಕವಾಗಿ ಅತ್ಯಂತ ಮಹತ್ವದ ನಾಡಾಗಿದೆ. ಮಂದಿರ ಮಜೀದ ಕೋಟೆ, ಕಟ್ಟಡ, ವಾಸ್ತುಶಿಲ್ಪ ಎಲ್ಲವೂ ಸಾಕ್ಷಿ ಸಂಕೇತವಾಗಿ ಉಳಿದಿವೆ.

## ಅನುಬಂಧ - 2

# ವಕ್ತಾರರ ಪಟ್ಟಿ

| | | | |
|---|---|---|---|
| 1) | ಹೆಸರು | : | ದಿಲೀಪ ಠಾಕೂರ |
| | ಊರು | : | ರಾಜಪೂತ ಗಲಿ |
| | ವಯಸ್ಸು | : | 75 |
| | ಶಿಕ್ಷಣ | : | ಅಶಿಕ್ಷಿತ |
| | ಕಾಯಕ | : | ಮಾರ್ಗದರ್ಶಕ (ಗೈಡ) |
| 2) | ಹೆಸರು | : | ಮನೋಜ |
| | ಊರು | : | ಚೌಬಾರ |
| | ವಯಸ್ಸು | : | 40 |
| | ಶಿಕ್ಷಣ | : | ಬಿ.ಕಾಮ |
| | ಕಾಯಕ | : | ಮಾರ್ಗದರ್ಶಕ (ಗೈಡ) |
| 3) | ಹೆಸರು | : | ಸೊನಮ್ಮ |
| | ಊರು | : | ತಳಘಾಟ |
| | ವಯಸ್ಸು | : | 70 |
| | ಶಿಕ್ಷಣ | : | ಅಶಿಕ್ಷಿತ |
| | ಕಾಯಕ | : | ಕೂಲಿ |
| 4) | ಹೆಸರು | : | ಝುರೇಮ್ಮಾ |
| | ಊರು | : | ವಾಲದೊಡ್ಡಿ |
| | ವಯಸ್ಸು | : | 60 |
| | ಶಿಕ್ಷಣ | : | ಅಶಿಕ್ಷಿತೆ |
| | ಕಾಯಕ | : | ಕಲಾವಿದೆ |
| 5) | ಹೆಸರು | : | ಹಿರೇಶ |
| | ಊರು | : | ನೌಬಾದ |
| | ವಯಸ್ಸು | : | 55 |
| | ಶಿಕ್ಷಣ | : | ಅಶಿಕ್ಷಿತ |
| | ಕಾಯಕ | : | ಪೂಜಾರಿ |
| 6) | ಹೆಸರು | : | ತೇಜಮ್ಮಾ |
| | ಊರು | : | ಮರಜಾಪೂರ |
| | ವಯಸ್ಸು | : | 60 |
| | ಶಿಕ್ಷಣ | : | ಅಶಿಕ್ಷಿತೆ |
| | ಕಾಯಕ | : | ಗೃಹಿಣಿ |

7) ಹೆಸರು : ಬಾಬಣ್ಣಾ
ಊರು : ಮಂಗಲ ಪೇಟ
ವಯಸ್ಸು : 65
ಶಿಕ್ಷಣ : ಅಶಿಕ್ಷಿತ
ಕಾಯಕ : ಮಾಗದರ್ಶಕ (ಗೈಡ)

8) ಹೆಸರು : ರವಿ
ಊರು : ರಜಪೂತಗಲಿ
ವಯಸ್ಸು : 40
ಶಿಕ್ಷಣ : ಪಿ.ಯು.ಸಿ.
ಕಾಯಕ : ಲೇಬರ (ಕೂಲಿ)

9) ಹೆಸರು : ಜಗದೇವಿ
ಊರು : ವಾಲದೊಡ್ಡಿ
ವಯಸ್ಸು : 35
ಶಿಕ್ಷಣ : 10 ತರಗತಿ
ಕಾಯಕ : ಗೃಹಿಣಿ

10) ಹೆಸರು : ರಾಜಮ್ಮಾ
ಊರು : ಒಳಕೋಟಿ
ವಯಸ್ಸು : 60
ಶಿಕ್ಷಣ : ಪಿ.ಯು.ಸಿ.
ಕಾಯಕ : ಕಲಾವಿದೆ

11) ಹೆಸರು : ರುಕ್ಕಮ್ಮಾ
ಊರು : ತಳಘಟ
ವಯಸ್ಸು : 60
ಶಿಕ್ಷಣ : ಬಿ.ಎ
ಕಾಯಕ : ಗೃಹಿಣಿ

12) ಹೆಸರು : ಕಲೀಮ್
ಊರು : ಮನೀಯಾರ ತಾಲೀಮ
ವಯಸ್ಸು : 60
ಶಿಕ್ಷಣ : ಬಿ.ಎ.
ಕಾಯಕ : ಶಿಕ್ಷಕಿ

ಅನುಬಂಧ - 3

# ಆಕರ ಗ್ರಂಥಗಳು


1) ಬೀದರ ಜಿಲ್ಲಾ ದರ್ಶನ - ಸಂ. ಡಾ॥ ಜಗನ್ನಾಥ ಹೆಬ್ಬಾಳೆ.

2) ಬೀದರ ಜಿಲ್ಲಾ ಸ್ವಾತಂತ್ರ ಹೋರಾಟಗಾರರು - ಸಂ. (ಪ್ರೋ. ವಿರೇಂದ್ರ ಸಿಂಪಿ.) 1999.

3) ಬೀದರ ಜಿಲ್ಲಾ ಸಾಂಸ್ಕೃತಿಕ ಅಧ್ಯಯನ - ಸಂ. (ಬಸವರಾಜ ಸಬರದ.)

4) ಮಹಮ್ಮದ ಗವಾನ - ಸಂ. (ಎಲ್.ಆರ್. ಕುಲಕರ್ಣಿ.)

5) ಬೀದರ ಜಿಲ್ಲೆಯ ಸಾಹಿತ್ಯವಲೋಕನ - ಸಂ. ಡಾ॥ ಜಗನ್ನಾಥ ಹೆಬ್ಬಾಳೆ 1998.

6) ಬುದ್ಧ ಬಗವಾನ ಹೆಚ್. - ಸಂ. ಗಂಗಾಧರನ ಎಂ.ಎ.ಬಿ.ಎಲ್. 1970.

7) ಅನುಭವ ಮಂಟಪ ಸ್ಮರಣ ಸಂಚಿಕೆ - ಸಂ. ರಮಜಾನ ದರ್ಗಾ 2004.

8) ರಂಜೇರುವಿನ ಸಿಂದರು - ಸಂ. ಪ್ರೋ॥ ಸಂಗಯ್ಯ ಹಿರೇಮ್ಮಠ.

9) ಬೀದರ ಜಿಲ್ಲಾ 72ನೇ ಕನ್ನಡ ಸಾಹಿತ್ಯ ಸಮ್ಮೇಳನದ ಚೆಂಬೆಳಕು - ಸಂ. ನೆನಪಿನ ಕಾಣಿಕೆ 2004.

10) ಬೀದರ ಉತ್ಸವ ಸ್ಮರಣ ಸಂಚಿಕೆ 2006 - ಸಂ. ಪ್ರೊ॥ ಬಿ.ಆರ್. ಕೊಂಡ ಬೀದರ. 2006.

11) ಬೀದರ ಉತ್ಸವ ಸ್ಮರಣ ಸಂಚಿಕೆ - ಸಂ. ದೇವು ಪತ್ತರ ವರದಿಗಾರರು ಪ್ರಜಾವಾಣಿ ಬೀದರ. 2006.

12) ವಿಜಯ ಕರ್ನಾಟಕ ಪತ್ರಿಕೆ ದಿನಾಂಕಃ 26-12-2006.

13) ಭೋಮಗೊಂಡೇಶ್ವರ - ಒಂದು ಆಧ್ಯಯನ - ಸಂ. ಸುನೀತಾ ಬಾಬುರಾವ 2005.



ಬೀದರಿನ ನರಸಿಂಹ ಝರಣಿಯ ದ್ವಾರ, ತಾ|| ಜಿ|| ಬೀದರ



ಬೀದರಿನ ಗುರುನಾನಕ ಝರ್, ತಾ|| ಜಿ|| ಬೀದರ



ಬೀದರಿನ ಗುರುನಾನಕ (ಗುರುದ್ವಾರ)ದ ಅಮೃತ ಕುಂಡ, ತಾ।। ಜಿ।। ಬೀದರ



ಬೀದರಿನ ಪಾಪನಾಶನಿ ದೇವಾಲಯ, ತಾ।। ಜಿ।। ಬೀದರ



ಬೀದರಿನ ಮೇಥೊಡಿಸ್ಟ್ ಚರ್ಚ್, ತಾ॥ ಜಿ॥ ಬೀದರ



ಬೀದರಿನ ಮೆಥೋಡಿಸ್ಟ್ ಗವಿ, ತಾ॥ ಜಿ॥ ಬೀದರ



ವಾಲದೊಡ್ಡಿ ಗ್ರಾಮದ ಬೌದ್ಧ ವಿಹಾರ, ತಾ॥ ಜಿ॥ ಬೀದರ



ಬೀದರಿನ ಅಬ್ದುಲ್ ಫೈಜ್ ದರ್ಗದ ದ್ವಾರ, ತಾ॥ ಜಿ॥ ಬೀದರ



ಬೀದರಿನ ಮುಲ್ತಾನಿ ಪಾಶಾ ದರ್ಗಾ, ತಾ॥ ಜಿ॥ ಬೀದರ



ಬೀದರಿನ ಅಷ್ಟೂರ ಗುಮ್ಮಜಗಳು, ತಾ॥ ಜಿ॥ ಬೀದರ



ಅಷ್ಟೂರ ಗ್ರಾಮದ ಚೌಖಂಡಿ, ತಾ॥ ಜಿ॥ ಬೀದರ



ಅಷ್ಟೂರ ಗ್ರಾಮದ ಅಲ್ಲಮಪ್ರಭು ಗುಮ್ಮಜ, ತಾ॥ ಜಿ॥ ಬೀದರ



ಬೀದರಿನ ಮಹಮ್ಮದ ಗವಾನ ವಿದ್ಯಾಲಯ, ತಾ।। ಜಿ।। ಬೀದರ



ಬಸವಕಲ್ಯಾಣ ಕೋಟೆಯ ದ್ವಾರ, ತಾ।। ಬಸವಕಲ್ಯಾಣ, ಜಿ।। ಬೀದರ



ಬಸವಕಲ್ಯಾಣದ ಕೋಟೆ ತಾ।। ಬಸವಕಲ್ಯಾಣ, ಜಿ।। ಬೀದರ



ಬಸವಕಲ್ಯಾಣ ಅನುಭವ ಮಂಟಪ ತಾ।। ಬಸವಕಲ್ಯಾಣ, ಜಿ।। ಬೀದರ



ಜಲಸಂಗಿ ಗ್ರಾಮದ ಶಿವಮಂದಿರ, ತಾ।। ಹುಮನಾಬಾದ, ಜಿ।। ಬೀದರ



ಜಲಸಂಗಿ ಗ್ರಾಮದ ಶಿವಮಂದಿರದ ನೃತ್ಯ ಶಿಲೆ, ತಾ।। ಹುಮನಾಬಾದ, ಜಿ।। ಬೀದರ



ಬೀದರ ಕೋಟೆಯೊಳಗಿನ ಉದ್ಯಾನವನ, ತಾ॥ ಜಿ॥ ಬೀದರ



ನಾರಾಯಣಪೂರ ಗ್ರಾಮದ ಶಿವಮಂದಿರ, ತಾ॥ ಬಸವಕಲ್ಯಾಣ ಜಿ॥ ಬೀದರ



ಬೀದರ ಕೋಟೆಯ ಮೊದಲ ದ್ವಾರ, ತಾ।। ಜಿ।। ಬೀದರ



ಬೀದರ ಕೋಟೆಯ ಗುಂಬಜ್ ದರ್ವಾಜ, ತಾ।। ಜಿ।। ಬೀದರ

